# ಮಾಸ್ತಿಯವರ ಕಥೆಗಳು: ಒಂದು ಅಧ್ಯಯನ

**ಕನ್ನಡ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ**
**ಸಾದರ ಪಡಿಸಿದ ನಿಬಂಧ**

ಸಂಶೋಧಕರು:
ವಿ. ಯೋಗೀಂದ್ರ
ರಿ. ನಂ. **KSM/00226**

ಮಾರ್ಗದರ್ಶಕರು:
ಡಾ. ಎ.ಆರ್. ಮದನಕುಮಾರ್





ಕರ್ನಾಟಕ ಸಂಘ (ರಿ), ಮಂಡ್ಯ
ಎಂ. ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ,
ಕನ್ನಡ ವಿಶ್ವವಿದ್ಯಾನಿಲಯ ಹಂಪಿಯ ಮಾನ್ಯತೆ ಪಡೆದಿದೆ.
೨೦೦೭-೦೮.

# ಮಾಸ್ತಿಯವರ ಕಥೆಗಳು: ಒಂದು ಅಧ್ಯಯನ

ಕನ್ನಡ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ
ಸಾದರ ಪಡಿಸಿದ ನಿಬಂಧ

ಸಂಶೋಧಕರು:
ವಿ. ಯೋಗೀಂದ್ರ

ಮಾರ್ಗದರ್ಶಕರು:
ಡಾ. ಎ.ಆರ್. ಮದನಕುಮಾರ್






ಕರ್ನಾಟಕ ಸಂಘ (ರಿ), ಮಂಡ್ಯ
ಎಂ. ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ,
ಕನ್ನಡ ವಿಶ್ವವಿದ್ಯಾನಿಲಯ ಹಂಪಿಯ ಮಾನ್ಯತೆ ಪಡೆದಿದೆ.
೨೦೦೭-೦೮.

# ಮಾರ್ಗದರ್ಶಕರ ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಕನ್ನಡ ಎಂ.ಫಿಲ್. ಪದವಿಯ ವಿದ್ಯಾರ್ಥಿಯಾದ **ವಿ. ಯೋಗೀಂದ್ರ** ನನ್ನ ಮಾರ್ಗದರ್ಶನದಲ್ಲಿ **"ಮಾಸ್ತಿಯವರ ಕಥೆಗಳು: ಒಂದು ಅಧ್ಯಯನ"** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಸಿದ್ಧ ಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಭಾಗಶಃವಾಗಲೀ, ಪೂರ್ಣವಾಗಿಯೇ ಆಗಲೀ ಈ ವಿಶ್ವವಿದ್ಯಾಲಯಕ್ಕೆ ಅಥಾವ ಬೇರೆ ಯಾವುದೇ ವಿಶ್ವ ವಿದ್ಯಾಲಯಗಳ ಪದವಿ, ಡಿಪ್ಲೋಮಾ, ಅಥ**ವಾ** ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ: 30-9-2008

ಸ್ಥಳ: ಹುಣಸೂರು

ಮಾರ್ಗದರ್ಶಕರು.

**(ಡಾ. ಎ.ಆರ್. ಮದನಕುಮಾರ್)**

ಡಿ. ದೇವರಾಜ ಅರಸು

ಸರ್ಕಾರಿ ಪ್ರಥಮ ದರ್ಜೆ ಕಾಲೇಜು

ಹುಣಸೂರು.

(ಹಿರಿಯ ಶ್ರೇಣಿ ಕನ್ನಡ ಉಪನ್ಯಾಸಕರು.)

# ಅಭ್ಯರ್ಥಿಯ ಘೋಷಣಾ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ ೨೦೦೭-೦೮ ರ ಸಾಲಿನ ಕನ್ನಡ ಎಂ.ಫಿಲ್ ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್ ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು **"ಮಾಸ್ತಿಯವರ ಕಥೆಗಳು: ಒಂದು ಅಧ್ಯಯನ"** ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡಿದ್ದು ಡಾ. ಎ.ಆರ್. ಮದನಕುಮಾರ್ ರವರ ಮಾರ್ಗದರ್ಶನದಲ್ಲಿ ಸಂಶೋಧನೆ ನೆಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲೀ, ನಿಬಂಧದ ಅಧ್ಯಯನಗಳನ್ನಾಗಲೀ, ಬೇರೆ ಯಾವ ಗ್ರಂಥ ಹಾಗೂ ನಿಯತಕಾಲಿಕಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಕನ್ನಡ ವಿಶ್ವವಿದ್ಯಾಲಯವು ನೀಡುವ ಎಂ.ಫಿಲ್ ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ದಿನಾಂಕ: ೩೦-೦೬-೨೦೦೮

ಸ್ಥಳ: ಮಂಡ್ಯ

ಅಭ್ಯರ್ಥಿಯ ಸಹಿ

# ಪರಿವಿಡಿ

## ಅಧ್ಯಾಯ - ೧

# ಉದ್ದೇಶ ಮತ್ತು ವ್ಯಾಪ್ತಿ

ಸಾಹಿತ್ಯ ಬೆಳೆದಂತೆ ಇದರ ಬಗ್ಗೆ ಆಲೋಚನೆ ಮತ್ತು ಅಧ್ಯಯನ ಕ್ರಮಗಳು ಸಹ ಬದಲಾಗುತ್ತಾ ವಿವಿಧ ರೂಪಗಳನ್ನು ಪಡೆದುಕೊಂಡಿದೆ. ಸಾಹಿತ್ಯವು ತನ್ನ ಯುಗ ಧರ್ಮಕ್ಕೆ ಅನುಗುಣವಾಗಿ ವಿವಿಧ ವಸ್ತು, ತಂತ್ರ, ಭಾಷೆ, ಶೈಲಿ ಹಾಗೂ ಅಭಿವ್ಯಕ್ತಿಯ ರೀತಿಗಳನ್ನು ಮೈಗೂಡಿಸಿಕೊಳ್ಳುತ್ತದೆ. ಸಾವಿರ ವರ್ಷಗಳಷ್ಟು ಪ್ರಮುಖ ಭಾಷೆಗಳ ಸಾಹಿತ್ಯ ತನ್ನದೇ ಆದ ವೈಶಿಷ್ಟ್ಯದಿಂದ ಪ್ರಮುಖ ಭಾಷೆಗಳ ಸಾಲಿನಲ್ಲಿ ಒಂದು ಉತ್ತಮ ಸ್ಥಾನವನ್ನು ಪಡೆದುಕೊಂಡಿದೆ.

ಕನ್ನಡ ಸಾಹಿತ್ಯವೆಂಬ ಹೆಮ್ಮರ ಬೆಳೆಯಲು ಪೋಷಿಸಿದ ಸಾಹಿತ್ಯ ಪ್ರಕಾರಗಳೆಂದರೆ ಕಾವ್ಯ ಪ್ರಕಾರ, ಭಾವಗೀತ, ಕಥನಕಾವ್ಯ, ಮಹಾಕಾವ್ಯ, ನಾಟಕ, ಕಾದಂಬರಿ, ಸಣ್ಣಕಥೆ, ಲಲಿತಪ್ರಬಂಧ, ಆತ್ಮಕಥೆ, ವಿಮರ್ಶೆ ಹಾಗೂ ಸಂಶೋಧನಾ ಪ್ರಕಾರಗಳು ಇವುಗಳಲ್ಲಿ. ಅಬಾಲ ವೃದ್ಧಾದಿಯಾಗಿ ಎಲ್ಲರ ಮನಸ್ಸನ್ನು ಸೆಳೆದು ಒಮ್ಮೆ ಕೇಳಿದರೆ ಓದಿದರೆ ಮಾಸದೆ ಸ್ಮೃತಿಪಟಲದಲ್ಲಿ ಅಚ್ಚಳಿಯದೇ ಉಳಿಯುವ ಸಾಹಿತ್ಯ ಪ್ರಕಾರಗಳಲ್ಲಿ ಪ್ರಮುಖವಾದದ್ದು ಕಥಾ ಸಾಹಿತ್ಯ.

ಕನ್ನಡ ಕಥಾ ಸಾಹಿತ್ಯದಲ್ಲಿ ತಮ್ಮ ವಿಶಿಷ್ಟ ಪ್ರತಿಭೆಯಿಂದ ಸಣ್ಣ ಕಥೆಗಳ ಜನಕ ಎಂದೇ ಪ್ರಸಿದ್ಧರಾಗಿರುವ ಮಾಸ್ತಿ ವೆಂಕಟೇಶ್ ಅಯ್ಯಂಗಾರರು ಸಾಹಿತ್ಯಕ್ಕೆ ನೀಡಿದ ಕೊಡುಗೆ "ಮಾಸ್ತಿ ಕನ್ನಡದ ಆಸ್ತಿ" ಎಂದೇ ಪ್ರಸಿದ್ಧರಾಗುವಷ್ಟು ಅಪಾರವಾದದ್ದು.

ಸಾಹಿತ್ಯ ಪ್ರಕಾರಗಳಲ್ಲೆಲ್ಲಾ ಸಣ್ಣಕತೆ ಅತ್ಯಂತ ಪ್ರಾಚೀನವಾದದ್ದು. ಬಹುಶಃ ಕಾವ್ಯದ ಜೊತೆಗೆ ಅದು ಹುಟ್ಟಿರಬಹುದು. ಇಂದಿನ ಆಧುನಿಕ ರೂಪದಲ್ಲಿ ಅದು ಸಾಹಿತ್ಯ ಪ್ರಕಾರಗಳಲ್ಲೆಲ್ಲಾ ಅತ್ಯಂತ ಅರ್ವಾಚೀನವಾದದ್ದು. ಕಾದಂಬರಿ ಇಂಗ್ಲೀಷಿನಲ್ಲಿ ಹದಿನೇಳನೇ ಶತಮಾನದ ಕೊನೆಗೆ ಆರಂಭವಾಗಿ ಹದಿನೆಂಟನೇ ಶತಮಾನದಲ್ಲಿ ಬೆಳೆದು, ಹತ್ತೊಂಭತ್ತನೇ ಶತಮಾನದಲ್ಲಿ ಪ್ರಬುದ್ಧವಾದ ಒಂದು

ಅತ್ಯಂತ ಜನಪ್ರಿಯ ಸಾಹಿತ್ಯ ಪ್ರಕಾರವಾಗಿ ಸಣ್ಣಕತೆ ರೂಪುಗೊಂಡಿದೆ.೧ ಸಾಹಿತ್ಯ ಪ್ರಕಾರವಾದರೆ, ಸಣ್ಣಕತೆ ಹತ್ತೊಂಭತ್ತನೇ ಶತಮಾನದ ಹೊಸ ಬೆಳವಣಿಗೆ. ನಮ್ಮ ಕಾಲಕ್ಕೆ

---

ಅಡಿ ಟಿಪ್ಪಣಿ : ೧ ಮಾಸ್ತಿ ಸಾಹಿತ್ಯ ಸಮಗ್ರ ದರ್ಶನ, ಸಂ: ಡಿ ಎಸ್ ನಾಗಭೂಷಣ್, ಉಷಾ ಸಾಹಿತ್ಯ ಮಾಲೆ ಪ್ರಕಾಶನ, ಮೈಸೂರು. ಪು.ಸಂ:೧೭೩

ಮಾಸ್ತಿಯವರ ಸಾಹಿತ್ಯ ಸೃಷ್ಟಿ ಬಹುಮುಖವಾದದ್ದು, ವಿಫಲವಾದದ್ದು ಮತ್ತು ಮೇಲುಮಟ್ಟದ್ದು. ಆದರೂ ಬಹುಶಃ ಅವರ ಪ್ರತಿಭೆ ಇತರ ಸಾಹಿತ್ಯ ರೂಪಗಳಿಗೆ ಹೊಂದಿಕೊಂಡದ್ದಕ್ಕಿಂತ ಹೆಚ್ಚಾಗಿ ಸಣ್ಣಕತೆಗೆ ಹೊಂದಿಕೊಂಡಿದೆ. ಅವರ ಕಥೆಗಳನ್ನು ಓದಿದರೆ ಅವರ ಪ್ರತಿಭೆಗೆ ಮಾನವ ಜೀವನದ ನಿಕಟ ಪರಿಚಯ ಅದೆಷ್ಟು ಕಡೆ ದೊರೆತಿದೆ ಅದು ಎಷ್ಟು ನೈಜವಾಗಿ, ನವಿರಾಗಿ, ಆಳವಾದ ತಿಳಿವುಳ್ಳದ್ದಾಗಿದೆ ಎಂದು ಆಶ್ಚರ್ಯವಾಗುತ್ತದೆ.೨

ನಿಜಕ್ಕೂ ಸಣ್ಣಕತೆಯ ಸಾಧ್ಯತೆಗಳನ್ನು ವಿಸ್ತರಿಸಿ ಅದಕ್ಕೊಂದು ರೂಪಕೊಟ್ಟು ಅದನ್ನೊಂದು ಸಾಹಿತ್ಯ ಪ್ರಕಾರವಾಗಿ ಕನ್ನಡದಲ್ಲಿ ನೆಲೆಗೊಳಿಸಿದವರು ಮಾಸ್ತಿಯವರು. ಇವರಿಗಿಂತ ಮುಂಚೆ ಪಂಜೆಯವರು, ಎಂ. ಎಸ್. ಕಾಮತ್‌ರು, ಕೆರೂರು ವಾಸುದೇವಾಚಾರ್ಯರು, ಇವರೆಲ್ಲಾ ಕನ್ನಡದಲ್ಲಿ ಕತೆಗಳನ್ನು ಬರೆದರೂ ಸಹ ಪ್ರಖ್ಯಾತಿ ಗಳಿಸಿದವರು ಮಾಸ್ತಿಯವರು.

ಕತೆ ಹೇಳುವುದು ಮನುಷ್ಯನ ಜನ್ಮಜಾತವಾದ ಸ್ವಭಾವ. ಭಾರತೀಯ ಸಾಹಿತ್ಯದಲ್ಲಿ ಹಾಗೂ ಕನ್ನಡದಲ್ಲಿ ಕಥಾ ಸಾಹಿತ್ಯಕ್ಕೇನು ಬರವಿಲ್ಲ ಪಂಚತಂತ್ರ, ಹಿತೋಪದೇಶ, ಕಥಾಸರಿತ್ಸಾಗರ, ಇವುಗಳಲ್ಲದೆ. ಜೈನ ಧಾರ್ಮಿಕ ಕಥಾ ಸಂಗ್ರಹಗಳಾದ ಹರಿಷೇಣನ ಬೃಹತ್ಕಥಾ ಕೇಶ, ಭಗವತೀ ಆರಾಧನಾ, ಅಂತೆ ಕನ್ನಡದಲ್ಲಿ ವಡ್ಡಾರಾಧನೆ, ಧರ್ಮಾಮೃತ ಮೊದಲಾದ ಬರಹಗಳು ಬುದ್ಧ ಜಾತಕ ಕಥೆಗಳು ಹಾಗೂ ಎಲ್ಲಾ ಭಾಷೆಗಳಲ್ಲಿರುವ ಜನಪದ ಕತೆಗಳು, ಇತ್ಯಾದಿ ಆದರೆ ಆಧುನಿಕತೆ ಅರ್ಥದಲ್ಲಿ ನಾವು ಸಣ್ಣಕತೆ ಎಂದು ಕರೆಯುತ್ತಿರುವುದು ಪಶ್ಚಿಮದ ಕೊಡುಗೆ. ಈ ಶತಮಾನದ ಪ್ರಾರಂಭದಲ್ಲಿ ನಮ್ಮ ಸಾಹಿತ್ಯ ಪಶ್ಚಿಮದ ಆಧುನಿಕ ಸಣ್ಣಕತೆಗಳ ಸಂಪರ್ಕಕ್ಕೆ ಬಂದದ್ದರ ಪರಿಣಾಮವಾಗಿ ಮಾಡಿದಂಥದ್ದು. ಆದರೆ ಅದು ಪೂರ್ಣವಾಗಿ ಪಶ್ಚಿಮದ ಅನುಕರಣೆಯಾಗಿ ಬರಲಿಲ್ಲ. ಭಾರತೀಯ ಕಥಾ ಪರಂಪರೆಯ

ಕೆಲವೊಂದು ವಿಶಿಷ್ಟ ಅಂಶಗಳನ್ನು ಅಳವಸಿಕೊಂಡು ಬೆಳೆಯಿತು. ಈ ಬೆಳವಣಿಗೆಯಲ್ಲಿ ಮಾಸ್ತಿಯವರು ಮಹತ್ವದ ಪಾತ್ರ ವಹಿಸಿದರು.೩

ಮಾಸ್ತಿಯವರ ಕಥಾ ಜಗತ್ತು ದಿಗ್ಭ್ರಮೆಗೊಳಿಸುವಷ್ಟು ಹಿರಿದಾದ್ದು, ವೈವಿಧ್ಯಪೂರ್ಣವಾದದ್ದು, ವ್ಯಾಪಕವಾದದ್ದು. ಅವರ ಎಲ್ಲಾ ಕತೆಗಳ ವಸ್ತು ವೈವಿಧ್ಯ, ಹಾಸು ಬೀಸುಗಳು, ಅನುಭವ ಲೋಕ ಎಲ್ಲವೂ ಅನ್ಯಾದೃಷ್ಯ.

---

ಅಡಿ ಟಿಪ್ಪಣಿ : ೨ ಮಾಸ್ತಿಯವರ ಕತೆಗಳು. ಎ.ಎನ್.ಮೂರ್ತಿರಾವ್. ಕಾವ್ಯಾಲಯ ಪ್ರಕಾಶಕರು, ಮೈಸೂರು.

ಅಡಿ ಟಿಪ್ಪಣಿ : ೩ : ಗಿರಡ್ಡಿ ಗೋವಿಂದರಾಜ:– ಕನ್ನಡ ಕಥಾ ಪರಂಪರೆ ಮತ್ತು ಮಾಸ್ತಿ ಯವರ ಸಾಹಿತ್ಯ ಒಂದು ಅಧ್ಯಯನ ಪುಟ ೨೫.

ಅವರ ಒಂದೊಂದು ಕತೆಯ ಮೂಲಕವೂ ಜೀವನದ ಬೇರೆ ಬೇರೆ ಮುಖಗಳ ದರ್ಶನವನ್ನು ಮಾಡಿಸುತ್ತಾ ಒಟ್ಟಾರೆಯಾಗಿ ಸಮೃದ್ಧ ಬದುಕಿನ ವೈವಿಧ್ಯ ಪೂರ್ಣ ಚಿತ್ರಣ ನೀಡುತ್ತಲೇ ಬದುಕಿನ ಸಮಗ್ರವಾದ ದರ್ಶನವನ್ನು ನೀಡುವುದರತ್ತ ಮಾಸ್ತಿಯವರ ಪ್ರಯತ್ನವಿದೆ. ಸಾಮಾಜಿಕ ಸಮಸ್ಯೆಗಳು, ಗಂಡು ಹೆಣ್ಣಿನ ಆಕರ್ಷಣೆ, ದಾಂಪತ್ಯದ ನೋವು ನಲಿವುಗಳು, ಮನುಷ್ಯನ ಘನತೆ, ತ್ಯಾಗ, ನ್ಯಾಯಪರತೆ, ಔದಾರ್ಯ, ಸ್ನೇಹ, ಪ್ರೀತಿ, ಮಾನವ ಕರುಣೆ, ಮನುಷ್ಯನ ಸ್ವಾರ್ಥ, ದೌರ್ಬಲ್ಯ, ಸಣ್ಣತನ, ಇವುಗಳನ್ನು ಬಿಂಬಿಸುವಂಥ ಕತೆಗಳು, ಸಂಸ್ಕೃತ ದರ್ಶನದ ಚಿತ್ರಗಳು, ಪರಂಪರಾಗತ ಸದ್ ಮೌಲ್ಯಗಳನ್ನು ಎತ್ತಿ ಹಿಡಿಯುವಂಥ ಪ್ರಸಂಗಗಳ ಚಿತ್ರ, ಸಾರ್ಥಕ ಬದುಕಿನ ರೀತಿ, ಹೆಣ್ಣಿನ ಪಾತಿವ್ರತ್ಯ, ಮಮತೆ ವಾತ್ಸಲ್ಯ, ಸಂಯಮ ಪ್ರೀತಿ ಇವುಗಳನ್ನು ಕೀರ್ತಿಸುವಂಥ ಸಂದರ್ಭದ ಚಿತ್ರಗಳು ಇವನ್ನೆಲ್ಲಾ ಮಾಸ್ತಿಯವರ ಕತೆಗಳು ಒಳಗೊಳ್ಳುತ್ತವೆ.೪

ಸಣ್ಣ ಕತೆಗಳಷ್ಟು ಜನಪ್ರಿಯವೂ ಸರ್ವದರಣೀಯೂ ಆದ ಸಾಹಿತ್ಯ ಪ್ರಕಾರ ಮತ್ತೊಂದಿಲ್ಲ. ಯುಗ ಮನೋಧರ್ಮವನ್ನು ಬಿಂಬಿಸುವುದಕ್ಕೆ ಇದು ಶಕ್ತವಾದ ಮಾಧ್ಯಮವಾಗಿದೆ ಎನ್ನಬಹುದು. ಸಹೃದಯದ ಮನಸ್ಸನ್ನು ಮುಟ್ಟುವಲ್ಲಿ ಕತೆ, ಕಾದಂಬರಿ ಮತ್ತು ವಿಚಾರವಾದಿ ಕಾವ್ಯ, ನಾಟಕ, ಕಥೆಗಳು ಪರಿಣಾಮಕಾರಿಯಾದವು.

ಆದ್ದರಿಂದ ಕತೆ ರಚನೆಗಾರ ಎಲ್ಲಾ ಜ್ಞಾನ ಶಾಖೆಗಳ ಪರಿಚಯವನ್ನು ಮಾನವ ಜೀವನ ದರ್ಶನದ ಜ್ಞಾನವನ್ನು ಚೆನ್ನಾಗಿ ಪಡೆದಿರುತ್ತಾನೆ. ಓದುಗರ ಮನಸ್ಸಿನ ಕತ್ತಲೆಯನ್ನು ನಿರ್ಮೂಲನ ಮಾಡುವಂತಹ ತಿಳುವಳಿಕೆಯ ಬೆಳಕನ್ನು ನೀಡಬೇಕು. ಅವರ ಬೌದ್ಧಿಕ ದಿಗ್ವಿಜಯವೇ ಪರಮ ವಿಜಯ ಎಂಬ ಭಾವನೆಯನ್ನು ಅರಿತಿರಬೇಕು. ಅಂತಹ ಲೇಖಕನ ಕತೆಗಳು ಶ್ರೇಷ್ಠ ಕತೆಯಾಗುವುದರಲ್ಲಿ ಎರಡು ಮಾತಿಲ್ಲ.

ಆಧುನಿಕ ಕನ್ನಡ ಸಾಹಿತ್ಯದ ಅರುಣೋದಯ ಕಾಲದಲ್ಲಿನ ಸಾಹಿತ್ಯವು ಮುಖ್ಯವಾಗಿ ನಿಸರ್ಗಕ್ಕೆ ಪ್ರತಿಕ್ರಿಯೆ ಮತ್ತು ಆದ್ಯಾತ್ಮಿಕತೆಯ ಕಾಳಜಿಯನ್ನಿಟ್ಟುಕೊಂಡು ರಚನೆಯಾದವು. ಈ ರಮ್ಯ ಕಾಲ ಘಟ್ಟದಲ್ಲಿ ಬರುವ ಕುವೆಂಪು, ಬೇಂದ್ರೆ, ಕಾರಂತ, ಪು.ತಿ.ನ ರಂತಹವರ ಸಾಲಿನಲ್ಲಿ ನಿಲ್ಲಬಲ್ಲಂತಹ ಮತ್ತೊಬ್ಬ ಶ್ರೇಷ್ಠ ಸಾಹಿತಿ ಮಾಸ್ತಿಯವರಾಗಿದ್ದಾರೆ.

ಅಡಿ ಟಿಪ್ಪಣಿ : ೪ : ಮಾಸ್ತಿ. ಸಂ:- ರಾ.ಲಕ್ಷ್ಮಿನಾರಾಯಾಣ:- ಕರ್ನಾಟಕ ಸಾಹಿತ್ಯ ಅಕಾಡೆಮಿ ಪುಟ:-೧೨

ಕನ್ನಡದ ಆಸ್ತಿಯೆಂದೇ ಖ್ಯಾತರಾದ ಮಾಸ್ತಿಯವರು ಆಧುನಿಕ ಕನ್ನಡ ಸಾಹಿತ್ಯ ದೇವಿಯ ಸಿರಿ ಮುಡಿಲಲ್ಲಿ ಹೊಳೆಯುವ ಕೆಲವೇ ಅನರ್ಘ್ಯ ರತ್ನಗಳಲ್ಲಿ ಒಬ್ಬರು. ತಮ್ಮ ಸ್ಥಾನವನ್ನು ವಿಶಿಷ್ಟವಾಗಿ ಗುರುತಿಸಿಕೊಂಡ ಮಾಸ್ತಿ 'ಕನ್ನಡದ ಸಣ್ಣಕತೆಗಳ ಜನಕ' ರೆಂದು ಪ್ರಸಿದ್ಧರು. ಆಡಳಿತಾಧಿಕಾರಿಯಾಗಿ ವೈಭವದ ವಿಲಾಸಿ ಜೀವನದಲ್ಲಿ ತಮ್ಮ ಆಯುಷ್ಯವನ್ನು ಕಳೆಯದೇ ಸಾಹಿತ್ಯ ದೇವಿಯ ಸೇವೆಗಾಗಿ ತಮ್ಮನ್ನು ಸಮರ್ಪಿಸಿಕೊಂಡರು. ಬಹುಮುಖಿ ವ್ಯಕ್ತಿತ್ವದ ಪ್ರಖಾಂಡ ಪಂಡಿತರು. ಇವರ ಲೇಖನಿ ಕೇವಲ ಸಣ್ಣಕಥೆಯ ರಚನೆಗೆ ಮಾತ್ರ ಮೀಸಲಾಗದೆ, ಆಧುನಿಕ ಕನ್ನಡ ಸಾಹಿತ್ಯದ ಎಲ್ಲಾ ಮುಖಗಳ ಪರಿಚಯವನ್ನು ಮಾಡಿಕೊಟ್ಟರು.

ನಮಗೆ ಪ್ರಸ್ತುತ ಸಾಹಿತ್ಯ ವಿಚಾರಗಳ ಚರ್ಚೆಯಲ್ಲಿ ಇತರ ಕವಿ, ಲೇಖಕರ ಕುರಿತು ಚರ್ಚೆಯಾದಂತೆ ಮಾಸ್ತಿಯವರ ವಿಚಾರಧಾರೆಗಳು ಚರ್ಚೆಗೆ ಅಗತ್ಯವೆನಿಸಲ್ಪಟ್ಟಿಲ್ಲ (ಬಹುತೇಕರಿಗೆ). ಈ ಬಹುತೇಕರ ದೃಷ್ಟಿಯಲ್ಲಿ ಮಾಸ್ತಿಯವರು ಬ್ರಾಹ್ಮಣ ವರ್ಗದವರು ಅವರಿಗೆ ಕೆಳವರ್ಗದವರ ಧ್ವನಿಯಾಗಿ ಸಾಹಿತ್ಯ ರಚಿಸಲಾಗಲಿಲ್ಲ. ಅವರಲ್ಲಿ ಸರ್ವ ಸಮಾನತೆಯ ತತ್ವ ಮಾಡಿಲ್ಲ. ವಿಶ್ವಭ್ರಾತೃತ್ವದ ಕಲ್ಪನೆಯೂ ಇಲ್ಲ, ಅವರಿಗೆ ದೇವರು, ಧರ್ಮ, ಆಧ್ಯಾತ್ಮಿಕತೆಯ ಬಗ್ಗೆಯೇ ಹೆಚ್ಚಿನ ಒಲವನ್ನು ಉಳ್ಳಂತವರು ಎಂಬ ಸಂಕುಚಿತ ಮನೋಭಾವದಿಂದ ಅವರನ್ನು ದೂರಿಕರಿಸಿ ಅವರ ಸಾಹಿತ್ಯದಲ್ಲಿನ ಸತ್ಯಫಲಗಳನ್ನು ಅದರ ಒಳ ತುಡಿತಗಳನ್ನು ಬಹುತೇಕರು ಅರಿಯುವ ಪ್ರಯತ್ನ ಮಾಡದಿರುವುದು ಶೋಚನೀಯ ಸಂಗತಿಯೇ ಸರಿ.

ಮಾಸ್ತಿಯವರು ಹುಟ್ಟಿನಿಂದ ಬ್ರಾಹ್ಮಣರಾದರು ಅವರ ಸಾಹಿತ್ಯ ಬ್ರಾಹ್ಮಣತ್ವದಿಂದ ಕೂಡಿರಲಿಲ್ಲ ಎಂಬುದನ್ನು ಗಮನಿಸಬೇಕು. ಯಾವುದೇ ಕವಿ ಲೇಖಕ ಆಯಾ ವರ್ಗದಿಂದ ಬಂದ ಮಾತ್ರಕ್ಕೆ ಆತ ಅದರ ಪರಿಧಿಯಲ್ಲೇ ಇದ್ದು ಇತರ ವರ್ಗಗಳನ್ನು ಕಡೆಗಣಿಸಿ ನೋಡುತ್ತಾನೆನ್ನುವುದನ್ನು ಎಷ್ಟು ಸಮಂಜಸ? ಇದು ನಮ್ಮ ಪೂರ್ವಗ್ರಹ ಗ್ರಹಿಕೆಯಷ್ಟೇ. ಇದನ್ನು ಮೀರಿ ಮಾಸ್ತಿಯವರು ಎಲ್ಲಾ ವರ್ಗದವರ ಒಳ ತೋಟಿಗಳನ್ನು ಚಿತ್ರಿಸುವ ಮೂಲಕ ಅವರ ದನಿಯಾಗಿ ನಿಲ್ಲಬಲ್ಲರೇ ಎಂಬುದು ಮಾಸ್ತಿಯವರ ಸಾಹಿತ್ಯ ಅಭ್ಯಸಿಸಿದಾಗ ತಿಳಿಯುವ ಸಂಗತಿ.

ಬೇಂದ್ರೆ– ಭಾವಗೀತೆ, ಕುವೆಂಪು –ಮಹಾಕಾವ್ಯ, ಕಾರಂತ – ಕಾದಂಬರಿ, ಪು.ತಿ.ನ. – ನೀತಿನಾಟಕ, ಮೂರ್ತಿರಾವ್‌ಗೆ ಪ್ರಬಂಧ ಮುಖ್ಯವಾದಂತೆ ಮಾಸ್ತಿಯವರ ವಿಶಿಷ್ಟತೆ ಅವರ ಸಣ್ಣಕತೆಗಳಲ್ಲೆಂದು ಸಾಮಾನ್ಯವಾಗಿ ಗುರುತಿಸಲಾಗಿದೆ. ಬಹುಶಃ ಸಂಖ್ಯೆಯಲ್ಲಿ ಇವರಷ್ಟು ಅಪಾರ ಕತೆಗಳನ್ನು ಬರೆದವರು ಕನ್ನಡದಲ್ಲಿ ಬೇರ್‍ಯಾರು ಇಲ್ಲ ಎಂದರೆ ಅತಿಶಯೋಕ್ತಿಯಲ್ಲ ಎಂದು ಅನಿಸುತ್ತದೆ. ಸಧ್ಯಕ್ಕೆ ಅವರ ಕತೆಗಳನ್ನೆ ಕುರಿತು ವಿಶ್ಲೇಷಿಸುವುದು ಹಾಗೂ ಕತೆಯಲ್ಲಿನ ಪಾತ್ರದ ಚೌಕಟ್ಟನ್ನು ಗುರುತಿಸುವುದು ಹಾಗೂ ಪಾತ್ರಗಳನ್ನು ವಿಶ್ಲೇಷಿಸುವುದು ನಿಬಂಧದ ಉದ್ದೇಶ ಆಗಿದೆ.

ಸಣ್ಣ ಕತೆಯ ಪ್ರಕಾರಕ್ಕೆ ಸಂಬಂಧಿಸಿದಂತೆ ಮಾಸ್ತಿಯವರದು ಅನುಪಮ ಸಾಧನೆ. ಸಾಹಿತ್ಯದ ಅಭ್ಯಸಿಗಳಿಗೆ ತಿಳಿದಿರುವಂತೆ ಅವರು ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿದ್ದು ಸಣ್ಣಕತೆ ರಚನೆಯಿಂದಲೇ. ೧೯೧೦ ರ ಸುಮಾರಿಗೆ ಅವರ ಮೊಟ್ಟ ಮೊದಲ ಕತೆ 'ರಂಗನ ಮದುವೆ' ಪ್ರಕಟವಾಯಿತು. ಆ ನಂತರ ಸುಮಾರು ಏಳೆಂಟು ದಶಕಗಳ ಕಾಲ ಅವರು ಈ ಪ್ರಕಾರಕ್ಕೆ ಬಂದು ನಿಶ್ಚಿತ ರೂಪವನ್ನು ಕೊಟ್ಟದೇ ಅಲ್ಲದೆ ಸಣ್ಣಕತೆಯ ಸಾಧ್ಯತೆಗಳನ್ನು ಹಿಗ್ಗಿಸಿ ಸಾಹಿತ್ಯದಲ್ಲಿ ಅದಕ್ಕೊಂದು ಶಾಶ್ವತ ಸ್ಥಾನವನ್ನು ಗಳಿಸಿಕೊಟ್ಟರು. ಈ ಕಾರಣದಿಂದ ಅವರು ಸಹಜವಾಗಿ "ಕನ್ನಡ ಸಣ್ಣಕತೆಯ ಜನಕ" ಎನಿಸಿದ್ದಾರೆ.೫

ಇದುವರೆವಿಗೂ ಪ್ರಕಟವಾಗಿರುವ ಮಾಸ್ತಿಯವರ ಕಥಾ ಸಂಕಲನಗಳು ಒಟ್ಟು ಹದಿನೈದು; ಒಟ್ಟು ಕತೆಗಳು ತೊಂಬತ್ತೊಂಭತ್ತು ಇವುಗಳ ಜೊತೆಗೆ 'ಮಾಯಣ್ಣನ ಕನ್ನಡಿ' ಎಂಬ ಇತ್ತೀಚಿನ ಕತೆಯನ್ನು ಸೇರಿಸಿದರೆ ಒಂದು ನೂರು ಕತೆ ಆಯಿತು. ಇಷ್ಟು ದೊಡ್ಡ ಪ್ರಮಾಣದ ಕತೆಗಳ ವಸ್ತುಗಳೂ ಕೂಡ ಬೆರಗು ಹುಟ್ಟಿಸುವಷ್ಟು ವೈವಿಧ್ಯಮಯವಾಗಿದೆ. ಅಧ್ಯಯನದ ಅನುಕೂಲಕ್ಕಾಗಿ ಇವರ ಕತೆಗಳನ್ನು ಈ ರೀತಿ ವಿಭಾಗಿಸಿಕೊಂಡರೆ ೧] ಸಾಮಾಜಿಕ ಕತೆ ೨] ಐತಿಹಾಸಿಕ ಕತೆ ೩] ಪೌರಾಣಿಕ ಕತೆ.೬

ಮಾಸ್ತಿಯವರೇ ಸ್ವತಃ ತಮ್ಮ ಸಣ್ಣ ಕತೆಯನ್ನು ಬರೆಯುವ ಸಂದರ್ಭದಲ್ಲಿ ಕತೆ ಬರೆಯುವ ಉದ್ದೇಶವನ್ನು ತಿಳಿಸಿಕೊಟ್ಟು ಈ ರೀತಿ ಸ್ಪಷ್ಟಪಡಿಸಿದ್ದಾರೆ. "ನನ್ನ ಕತೆಗಳನ್ನು ಬರೆಯುವಲ್ಲಿ ನನ್ನ ಉದ್ದೇಶ ಒಂದೇ ಒಂದು, ಎಂದು ನಾನು ಹಲವು ಸಂದರ್ಭದಲ್ಲಿ ಸೂಚಿಸಿದ್ದೇನೆ. ಆ ಉದ್ದೇಶ ಜೀವನ ನನಗೆ ನೀಡಿರುವ ದರ್ಶನವನ್ನು ವಿವರಿಸುವ ಚಿತ್ರಗಳನ್ನು ಕೊಡುವುದು.

---

ಅಡಿ ಟಿಪ್ಪಣಿ : ೫ : ಮುನ್ನುಡಿ. . ಮಾಸ್ತಿಯವರ ಸಮಗ್ರ ಕಥೆ ಸಂಪುಟ ೧. ಮಾವಿನಕೆರೆ ರಂಗನಾಥ್ ಪುಟ–೧೦. ೧೧.

ಅಡಿ ಟಿಪ್ಪಣಿ : ೬ : ಮುನ್ನುಡಿ. . ಮಾಸ್ತಿಯವರ ಸಮಗ್ರ ಕಥೆ ಸಂಪುಟ ೧. ಮಾವಿನಕೆರೆ ರಂಗನಾಥ್ ಪುಟ–೧೦. ೧೧.

ಇಂದಿನ, ಹಿಂದಿನ, ನಮ್ಮ ನಾಡಿನ, ನಮ್ಮ ರಾಷ್ಟ್ರದ, ಬೇರೆ ಹತ್ತು ರಾಷ್ಟ್ರಗಳ, ಬಹುತೆರನ ಜೀವನ ಚಿತ್ರಗಳು ನನ್ನ ಕತೆಗಳಲ್ಲಿ ಕಾಣುತ್ತವೆ. ಇವು ಸತ್ಯವನ್ನು ಬಿಂಬಿಸಿವೆ, ಸ್ಫುಟವಾಗಿವೆ, ಇಷ್ಟೋ ಅಷ್ಟೋ ರಸಾನುಭವವನ್ನು ನೀಡುತ್ತವೆ, ಎಂದು ಓದುವವರಿಗೆ ಕಂಡರೆ ನನ್ನ ಕೆಲಸ ಸಾರ್ಥಕ ಆಯಿತು. ಇದರ ಆಚೆಗೆ ಇವನ್ನು ಓದುವವರು ಇವುಗಳಲ್ಲಿ ಜೀವನವನ್ನು ಕುರಿತು ಇಂಥ ಅಂಥ ನೀತಿ ಮುಂತಾದುವನ್ನು ನಿರೂಪಿಸುವ ಉದ್ದೇಶ ಇದೆ ಎಂದು ಭಾವಿಸಬಹುದು. ದಿಟವಾದ ಜೀವನದಿಂದ ಒಂದು ಭಾವ ತೋರುವಂತೆ ಜೀವನದ ದಿಟವಾದ ಒಂದು ಚಿತ್ರದಿಂದಲೂ ಒಂದು ಭಾವ ತೋರುವುದು ಸಹಜ. ಆದರಿಂದ ಓದುವವರಿಗೆ ಪ್ರಯೋಜನ ಸಂತೋಷ ಆಗುವುದಾದರೆ ನಾನು ಅದನ್ನು ಒಪ್ಪಿಕೊಳ್ಳುತ್ತೇನೆ.”೭

ಬಹುತೇಕ ನಮ್ಮ ಎಲ್ಲಾ ಸಾಹಿತಿಗಳುವಿವಿಧ ವೃತ್ತಿಗಳೊಂದಿಗೆ ತಮ್ಮ ಸಾಹಿತ್ಯ ಸೇವೆಯನ್ನು ಮುಂದುವರೆಸಿದಂತವರು. ಅದರಂತೆಯೇ ಮಾಸ್ತಿಯವರು ಸರ್ಕಾರದ ಹಲವಾರು ಉನ್ನತ ಹುದ್ದೆಗಳನ್ನು ನಿರ್ವಹಿಸಿದಂತವರು. ಲೋಕಾನುಭವವನ್ನು ಪಡೆದಿದ್ದಂತಹವರೂ ಜನ ಸಾಮಾನ್ಯರೊಡನೆ ಕಲೆತು ‘ದೇಶಸುತ್ತು ಕೋಶ ಓದು’ ಎಂಬ ನಾಣ್ಣುಡಿಯಂತೆ ಇವರು ಇವೆರಡನ್ನು ಮೇಳೈಸಿಕೊಂಡು ಅದರ ಫಲವನ್ನು ಸಾಹಿತ್ಯದಲ್ಲಿ ಎರಕ ಒಯ್ಯಲು ಪ್ರಯತ್ನಿಸಿದಂತವರು. ಆಡು ಮುಟ್ಟದ ಸೊಪ್ಪಿಲ್ಲ ಎಂಬಂತೆ ನವೋದಯ ಸಾಹಿತಿಗಳು ಕೈ ಹಾಕದ ಕ್ಷೇತ್ರವಿಲ್ಲ. ಅದರಲ್ಲಿ ಮಾಸ್ತಿಯವರು ಒಬ್ಬರಾಗಿದ್ದು ಅವರ ಕತೆಗಳೆಲ್ಲಾ ಅದರ ಗಾಢತೆಯನ್ನು ಕಾಣಬಹುದು.

ಲೇಖಕನೊಬ್ಬನ ತಾಂತ್ರಿಕತೆ, ಜೀವನ ದೃಷ್ಟಿ ಎಲ್ಲಕ್ಕಿಂತ ಮುಖ್ಯವಾಗಿ ವ್ಯಕ್ತವಾಗುವುದು ಅವನು ಕತೆ ಹೇಳುವ ರೀತಿಯಲ್ಲಿ ಮತ್ತು ಅದಕ್ಕಿರುವ ಉದ್ದೇಶದಲ್ಲಿ. ಮಾಸ್ತಿ ಕತೆ ಹೇಳುವವರೂ ಅಲ್ಲ–ಹಿಂದಿನ ಪುರಾಣಿಕರುಗಳಂತೆ, ಕತೆ ಕಟ್ಟುವವರೂ ಅಲ್ಲ, ಅವರ ಮುಂದೆ ಬಂದ ನವ್ಯರಂತೆ. ಅವರು ಕತೆಯನ್ನು ದಾಟಿಸುವವರು, ಒಪ್ಪಿಸುವವರು.೮

‘ಶ್ರೀನಿವಾಸ’ ಎಂಬ ಕಾವ್ಯನಾಮದಿಂದ ಪ್ರಖ್ಯಾತರಾದ ಮಾಸ್ತಿಯವರು ತಮ್ಮ ಕೊನೆಯ ಕಥಾ ಸಂಕಲನವನ್ನು ಬರೆಯುವ ಸಂದರ್ಭದಲ್ಲಿ ಕತೆ ಹೇಳುವುದು ಒಂದು ಒಳ್ಳೆಯ ಕೆಲಸ, ಪುಣ್ಯದ ಕೆಲಸ ಎಂಬ ನಂಬಿಕೆ ಇದ್ದಿತೆಂದಾಯಿತು.

---

ಅಡಿ ಟಿಪ್ಪಣಿ ೭: ಮುನ್ನುಡಿ: ಸಣ್ಣ ಕತೆಗಳು:- ೧೪

ಅಡಿ ಟಿಪ್ಪಣಿ ೮: ಮಾಸ್ತಿ ಸಾಹಿತ್ಯ ಸಮಗ್ರ ದರ್ಶನ, ಸಂ: ಡಿ ಎಸ್ ನಾಗಭೂಷಣ್, ಉಷಾ ಸಾಹಿತ್ಯ ಮಾಲೆ ಪ್ರಕಾಶನ, ಮೈಸೂರು. ಪು.ಸಂ:-೮

ಮತ್ತೆ ಮನುಷ್ಯನಾದವನು ತನ್ನ ಸುತ್ತಲ ಪರಿಸರದ ನೋವು ನಲಿವುಗಳಿಗೆ ಕುರುಡಾಗಿರಲಾರ. ಮನುಷ್ಯ ಮೃತನಾಗುತ್ತಾನೆ ಆದರೆ ಮಾನವ ಕುಲ ಶಾಶ್ವತವಾಗಿರಬೇಕು. ಅದಕ್ಕಾಗಿ ಸಮಾಜದಲ್ಲಿ ಪರಸ್ಪರರ ನಡುವೆ ಪ್ರೀತಿ, ವಿಶ್ವಾಸ, ಗೌರವಗಳು ಒಡಮೂಡಬೇಕು. ಈ ಬಗ್ಗೆಯ ನಿಲುವುಗಳಿಂದ ಹೊರಡುವ ಮಾಸ್ತಿಯವರಿಗೆ ಮನುಷ್ಯನ ಬಗ್ಗೆ ಹೊರಟಿದ್ದೆಲ್ಲವೂ ಕಥಾನಕದ ಧಾಟಿ ಪಡೆಯುತ್ತದೆ ಎಂದು ನಂಬಿದ್ದವರು. ಆದುದರಿಂದಲೇ ಅವರ ಈ ನಿಲುವು ಮನೋಜ್ಞವಾದುದ್ದೆಂದು ತಿಳಿದು ಕಥಾ ಸಂಕಲನದ ಅಧ್ಯಯನದಲ್ಲಿ ತೊಡಗುವುದು ಈ ನಿಬಂಧ ರಚನೆಯ ಮತ್ತೊಂದು ಉದ್ದೇಶ ಆಗಿದೆ.

ಮಾಸ್ತಿಯವರದು ನೂರು ಕತೆಗಳು, ನೂರಾರು ಪಾತ್ರಗಳು, ಬದುಕಿನ ಅನಂತ ಮುಖಗಳನ್ನು ಅವುಗಳ ಸ್ವಭಾವ, ವೈಚಿತ್ರ್ಯಗಳನ್ನು ಹೃದಯಸ್ಪರ್ಶಿಯಾಗುವಂತೆ ಅವರು ನಿರೂಪಿಸಿದ್ದಾರೆ. ಪ್ರೀತಿ, ನೋವು, ನಲಿವು, ದೇಶದ ಮತ್ತು ಮನುಷ್ಯನ ಘನತೆ, ಅವನತಿ, ಸಾರ್ಥಕ ಜೀವನ, ಪರಂಪರಾನುಗತ ಮೌಲ್ಯಗಳ ವಿಶ್ಲೇಷಣೆ ಹೀಗೆ ಅವರ ಕತೆಗಳಲ್ಲಿ ಒಡಮೂಡಿಸಿದ ವಿಷಯಗಳಿಲ್ಲ. ಇವರಷ್ಟು ಯಶಸ್ವಿ ಕತೆಗಳನ್ನು ಬರೆದವರು ಬಹುಶಃ ಇನ್ನೊಬ್ಬರಿರಲಾರರು. ನೂರು ಕತೆಗಳನ್ನು ಒಟ್ಟಿಗೆ ಓದಿದಾಗ ಒಬ್ಬರೆ ವ್ಯಕ್ತಿ ಇಷ್ಟೆಲ್ಲಾ ಬಗೆಯ ಕತೆ ಬರೆದರೆಂದರೆ ನಂಬುವುದು ಕಷ್ಟವಾಗುತ್ತದೆ.[೯]

ಇವರ ಎಲ್ಲಾ ಕತೆಗಳ ಅಧ್ಯಯನಕ್ಕೆ ತೊಡಗದೆ ಇವರ ಸ್ಥೂಲ ಕತೆಗಳ ಅಂದರೆ ಸಾಮಾಜಿಕ ಹಾಗೂ ಐತಿಹಾಸಿಕ ಕತೆಗಳ ಚೌಕಟ್ಟಿನಲ್ಲಿ ಬರುವಂತಹ ಪ್ರಮುಖ ಪಾತ್ರಗಳನ್ನು ಕುರಿತು ವಿವರಿಸುವುದೇ ನನ್ನ ನಿಬಂಧನೆಯ ಉದ್ದೇಶವಾಗಿದೆ.

ನಾನು ಮಾಸ್ತಿಯವರ ಕತೆಗಳನ್ನೇ ಈ ನಿಬಂಧ ರಚನೆಗೆ ಆಯ್ಕೆ ಮಾಡಿಕೊಳ್ಳಲು ಕಾರಣವೇನೆಂದರೆ, ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕತೆ ಅತಿ ಜನಪ್ರಿಯವಾದ ಸಾಹಿತ್ಯ ಪ್ರಕಾರ. ಅವರು ಹೊಸಗನ್ನಡ ಸಾಹಿತ್ಯದಲ್ಲಿ "ಪ್ರಾತಃ ಸ್ಮರಣೀಯರು", ಅಲ್ಲದೆ ನವೋದಯ ಸಾಹಿತ್ಯದ ಶ್ರೇಷ್ಠ ಮಟ್ಟದ ಕತೆಗಾರರಲ್ಲಿ ಮಾಸ್ತಿಯವರು ಅಗ್ರಗಣ್ಯ ಸ್ಥಾನದಲ್ಲಿದ್ದಾರೆ. ಇವರ ಕಾವ್ಯ, ಕಾದಂಬರಿ, ನಾಟಕ ಸಾಹಿತ್ಯಗಳ ಹಿಂದೆ ಕೆಲಸ ಮಾಡಿರುವ ಮನೋಧರ್ಮವೇ ಅವರ ಕತೆಗಳ ಹಿಂದೆಯೂ ಕಾಣಿಸಿಕೊಳ್ಳುತ್ತದೆ.

---

ಅಡಿ ಟಿಪ್ಪಣಿ ೯: ಮಾಸ್ತಿಯವರ ಸಮಗ್ರ ಕಥೆ ಅಧ್ಯಯನ. ಸಂಪುಟ- ೧. ಮಾವಿನಕೆರೆ ರಂಗನಾಥ್. ಮುನ್ನುಡಿ-೨೨

ನನ್ನ ನಿಬಂಧವು ಐದು ಅಧ್ಯಾಯಗಳನ್ನೊಳಗೊಂಡಿದ್ದು ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯನ್ನು ಒಳಗೊಂಡಿದೆ. ಎರಡನೇ ಅಧ್ಯಾಯದಲ್ಲಿ ಮಾಸ್ತಿಯವರ ಬದುಕು ಹಾಗೂ ಬರಹದ ಬಗೆಗೆ ವಿವರಿಸಿದ್ದೇನೆ. ಮೂರನೇ ಅಧ್ಯಾಯದಲ್ಲಿ ಅವರ ಕತೆಗಳಲ್ಲಿನ ವಸ್ತು ವೈವಿಧ್ಯತೆಯನ್ನು ಕುರಿತು ವಿವೇಚಿಸಿದ್ದೇನೆ. ನಾಲ್ಕನೇ ಅಧ್ಯಾಯದಲ್ಲಿ ಮಾಸ್ತಿಯವರ ಕಥೆಗಳಲ್ಲಿ ಪಾತ್ರಗಳ ಮನೋಭಾವನೆಗಳನ್ನು ವಿಶ್ಲೇಷಿಸಿದ್ದೇನೆ. ಕೊನೆಯ ಹಾಗೂ ಐದನೇ ಅಧ್ಯಾಯದಲ್ಲಿ ಮಾಸ್ತಿಯವರ ವಸ್ತು ಕಥಾ ನೋಟ, ಪಾತ್ರಗಳ ದೃಷ್ಟಿಕೋನದ ಹಿನ್ನಲೆಯಲ್ಲಿ ಸಮಗ್ರ ಚಿಂತನೆಯನ್ನು ತಿಳಿಸಿದ್ದೇನೆ. ಉಪ ಸಂಹಾರ ಹಾಗೂ ಸಮಾರೋಪದಲ್ಲಿ ಸಂಶೋಧನೆಯ ಒಟ್ಟು ಫಲಿತಗಳನ್ನು ವಿವರಿಸಿದ್ದೇನೆ. ಒಟ್ಟಾರೆ ಈ ನಿಬಂಧದಲ್ಲಿ ಮಾಸ್ತಿಯವರ ಕತೆಗಳ ಒಂದೊಂದನ್ನು ಪರಿಶೀಲಿಸದೆ ಕೆಲವು ಕತೆಗಳನ್ನು ಪ್ರಾತಿನಿಧಿಕವಾಗಿ ವಿಶ್ಲೇಷಿಸುವ ಕೆಲಸ ನನಗೆ ತಿಳಿದ ಮಟ್ಟಿಗೆ ಮಾಡಿರುತ್ತೇನೆ.

# ಅಧ್ಯಾಯ – ೨

## ಮಾಸ್ತಿಯವರ ಬದುಕು ಮತ್ತು ಬರಹ

"ಸಾಹಿತ್ಯ ಸುಪ್ತ ಲೋಕದ ಏಳು ಮಲೆಯ ಮೇಲ್ನಿಂತ
ವೆಂಕಟೇಶನ ಕನ್ನಡದ ಆಸ್ತಿಯಿಂದಾದ ಮಾಸ್ತಿ
ನಮಗಾಗಿ ಶಾರದೆಯು ಕೊಟ್ಟ ಸಾರಸ್ವತಲೋಕದಾಸ್ತಿ"೧

ನವೋದಯ ಕಾಲಘಟ್ಟದ ಅಗ್ರಗಣ್ಯ ಸಾಹಿತಿಗಳಲ್ಲಿ ಮಾಸ್ತಿಯವರು ಒಬ್ಬರು. 'ಹೊಸಗನ್ನಡ ಭೀಷ್ಮಾಚಾರ್ಯ'ರೆಂದೇ ಕರೆಸಿಕೊಂಡ ಮಾಸ್ತಿಯವರು ಸಾಹಿತ್ಯ ಎಲ್ಲಾ ಪ್ರಮುಖ ಪ್ರಕಾರಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ಮೂಲಕ ಈ ರಮ್ಯ ಕಾಲ ಘಟ್ಟದ ಸಾಹಿತ್ಯವನ್ನು ಸರ್ವ ವಿಧದಲ್ಲಿಯೂ ಶ್ರೀಮಂತಗೊಳಿಸಿದ ಕೀರ್ತಿಗೆ ಭಾಜನರಾಗಿದ್ದಾರೆ. ತಮ್ಮ ಬೃಹತ್ ಸಂಖ್ಯೆಯ ಅಮೂಲ್ಯ ಕೃತಿಗಳಿಂದ ನಿಜವಾದ ಅರ್ಥದಲ್ಲಿ ಕನ್ನಡದ ಆಸ್ತಿಯೆನಿಸಿ ಕನ್ನಡಿಗರ ಮನಸ್ಸನ್ನು ಸೂರೆಗೊಂಡಿದ್ದಾರೆ. ಹೊಸಗನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅವರಿಗಾಗಿಯೇ ಒಂದು ಪ್ರತ್ಯೇಕ ಅಧ್ಯಾಯ ಮೀಸಲಾಗಿರುವುದು ತಪ್ಪೇನಿಲ್ಲ.

**ಬಾಲ್ಯ :**

ಮಾಸ್ತಿಯವರು ೧೮೯೧ ಜೂನ್ ೬ರಂದು ಕೋಲಾರ ಜಿಲ್ಲೆಯ ಮಾಲೂರು ತಾಲ್ಲೂಕಿನ ಪುಟ್ಟ ಗ್ರಾಮ ಹೊಂಗೇನಹಳ್ಳಿಯಲ್ಲಿ ಜನಿಸಿದರು. ಅವರ ತಂದೆ ರಾಮಸ್ವಾಮಿ ಅಯ್ಯಂಗಾರ್, ತಾಯಿ ತಿರುಮಲ್ಲಮ್ಮ ಮಾಸ್ತಿಯವರಿಗೆ ತಂದೆ ತಾಯಿಗಳು ಇಟ್ಟ ಹೆಸರು ವೆಂಕಟೇಶ ಅಯ್ಯಂಗಾರ್ ಎಂದು. ಮಾಸ್ತಿಯವರು ಹುಟ್ಟಿದ್ದು ಹೊಂಗೇನಹಳ್ಳಿಯಲ್ಲಾದರೂ ನಮ್ಮ ಸಂಪ್ರದಾಯದಂತೆ ಅವರ ಮನೆತನದವರ ಊರು ಮಾಸ್ತಿಯವರ ಊರಾಗಿ ಅವರ ಹೆಸರಿನೊಂದಿಗೆ ಹೆಣೆದುಕೊಂಡು ಬಂತು.

ಮಾಸ್ತಿಯವರ ಮನೆತನ 'ಪೆರಿಯಾತ್' ಮನೆತನ ಎಂದು ಹೆಸರಾಗಿತ್ತು. ಅದರರ್ಥ ದೊಡ್ಡಮನೆ ಎಂದು. ಒಂದು ಕಾಲಕ್ಕೆ ಚೆನ್ನಾಗಿ ಬದುಕಿದ ಸಂಪ್ರದಾಯಸ್ಥ ಮನೆತನ ಇವರ ಕುಟುಂಬದ ಹಿರಿಯರೊಬ್ಬರು ಸುಲ್ತಾನನೊಬ್ಬನಲ್ಲಿ ದಿವಾನರಾಗಿದ್ದರು. ಈ ಮನೆತನದ ಮುತ್ತೈದೆಯೊಬ್ಬಳು ಸಹಗಮನ ಮಾಡಿ 'ಮಹಾಸತಿ' ಎನಿಸಿದಳು.

---

ಅಡಿ ಟಿಪ್ಪಣಿ ೧: ನಿನಗಿದೋ ನಮ್ಮ ನಮನ, ಪಿ.ಎಸ್. ರಾಮಾನುಜಂ

ಅದರಿಂದಾಗಿಯೇ ಆ ಊರು ಮಾಸ್ತಿ ಎಂದಾಯಿತು. ಮಾಸ್ತಿಯವರು ಹುಟ್ಟುವ ಕಾಲಕ್ಕೆ ಕುಟುಂಬಕ್ಕೆ ತೀವ್ರ ಬಡತನ ಬಂದಿತ್ತು. ಆದರೆ ಮರ್ಯಾದೆಗೆ ಕಿಂಚಿತ್ತು ಕುಂದು ಬಂದಿರಲಿಲ್ಲ ಜನ ಅದೇ ಗೌರವಾದಾರಗಳಿಂದ ಕಾಣುತ್ತಿದ್ದರು.

ತಂದೆಯವರು ತಾತ್ಕಾಲಿಕ ಉಪಾಧ್ಯಾಯರಾಗಿ ಕೆಲಸ ಮಾಡುತ್ತಿದ್ದರು. ಮಾಸ್ತಿಯವರೇ ಹೇಳಿಕೊಂಡಿರುವಂತೆ "ನಾನು ಹುಟ್ಟಿದ ಸಮಯಕ್ಕೆ ಸರಿಯಾಗಿ ನಮ್ಮ ತಂದೆ ತಮ್ಮ ಅಧಿಕಾರ ಕಳೆದುಕೊಂಡರು. ನನ್ನ ಅಣ್ಣ ಒಬ್ಬ ತೀರಿಕೊಂಡ, ನಮ್ಮ ಮನೆ ಎಂದೂ ಕಾಣದ ಒಂದು ಮಟ್ಟದ ಬಡತನವನ್ನು ಮುಟ್ಟಿತು". ಅವರ ಅಂದಿನ ಬವಣೆ ಎಂಥ ರೀತಿಯದು ಎಂದು ಭಾಸವಾಗುತ್ತದೆ.೨

**ವಿದ್ಯಾಭ್ಯಾಸ :**

ಮಾಸ್ತಿಯವರು ವಿದ್ಯಾಭ್ಯಾಸ ಮಾಡಲು ಪರಿವಾರದವರ ನೆರವಿನೊಂದಿಗೆ ಯಳಂದೂರು ಶಾಲೆಗೆ ಮಾಸ್ತಿಯನ್ನು ಸೇರಿಸಿದರು. ಅವರ ತಾತ ತಮ್ಮ ಊರಾದ ಹೊಂಗೇನಹಳ್ಳಿಗೆ ಕರೆದುಕೊಂಡು ಹೋಗಿ ಸಮೀಪದ ಶಿವಾರಪಟ್ಟಣದ ಶಾಲೆಗೆ ಸೇರಿಸಿದರು. ಹೊಂಗೇನಹಳ್ಳಿಗೆ ಹೋದದ್ದು ತಮ್ಮ ಬದುಕಿನ ಒಂದು ಮುಖ್ಯ ಘಟ್ಟವೆನ್ನುತ್ತಾರೆ ಮಾಸ್ತಿ. ತಮ್ಮ ಗುರುಗಳನ್ನು ಕುರಿತಂತೆ ಅವರು ಒಂದು ಕಡೆ ಬರೆದಿರುವ ಮಾತುಗಳಿವು.

"ಹಳ್ಳಿಯ ಉಪಾಧ್ಯಾಯ ನಾರಾಣಪ್ಪ ರವರು ನನ್ನ ಜೀವನಕ್ಕೆ ಮೊದಲ ಹೆಜ್ಜೆಗಳನ್ನು ತೋರಿಸಿಕೊಟ್ಟರು. ಹೈಸ್ಕೂಲಿನಲ್ಲಿ ಸುಬ್ಬಕೃಷ್ಣಯ್ಯ ರವರು ಭಾಷೆ ಕಲಿಯುವ ರೀತಿ ಏನೆಂದು ಹೇಳಿಕೊಟ್ಟು, ನನ್ನ ಜೀವನದ ಎರಡನೆಯ ಮಾರ್ಗದರ್ಶಕರಾದರು. ಟೇಟ್ ಸಾಹೇಬರು ಮಾತಿಗೆ ಹೇಗೆ ಹಾಗೆ ಬಾಳಿಗೆ ಗುರಿಯೇನು ಎನ್ನುವುದನ್ನೂ, ಆ ಗುರಿಯನ್ನು ಮುಟ್ಟುವುದಕ್ಕೆ ದಾರಿ ಏನು ಎನ್ನುವುದನ್ನೂ ಕಲಿಸಿಕೊಟ್ಟರು. ನನ್ನದೆಂಬ ಬಾಳುವೆ ಏನಾದರೂ ಬೆಲೆಯ ವಸ್ತು ಆಗಿದ್ದಲ್ಲಿ ಅದಕ್ಕೆ ಈ ಮೂವರು ಗುರುಗಳು ಕಾರಣರು. ಈ ಗುರುಗಳಿಗೆ ಈ ಸ್ಥಳದಲ್ಲಿ ನಾನು 'ನಮೋನಮೋ' ಎಂದು ಕೃತಜ್ಞತೆ ಸಲ್ಲಿಸುತ್ತೇನೆ".೩ ಎಂದು ತಮ್ಮ ಬಾಲ್ಯದ ಜೀವನದ ಏಳಿಗೆಗೆ ಗುರುಗಳು ಕಾರಣ ಎಂದು ಸ್ಮರಿಸುವರು.

ಬಾಲಕ ಮಾಸ್ತಿ ತುಂಬಾ ಚುರುಕು, ಓದಿನಲ್ಲಿ ಮುಂದು ಇದನ್ನು ಮನಗಂಡಿದ್ದ ಅವರ ತಾತ ' ಈ ಹುಡುಗ ಓದಿ ಜಾಣನಾಗುತ್ತಾನೆ, ಮನೆಯ ಬಡತನ ನೀಗುತ್ತಾನೆ' ಎಂದು ಹೇಳಿದರಂತೆ.

---

ಅಡಿ ಟಿಪ್ಪಣಿ ೨: ಮಾಸ್ತಿಯವರ ಸಮಗ್ರ ಕಥೆ ಅಧ್ಯಯನ. ಸಂಪುಟ- ೧. ಮುನ್ನುಡಿ:-ಪುಟ: ೧

ಅಡಿ ಟಿಪ್ಪಣಿ ೩: ಮಾಸ್ತಿಯವರ ಸಮಗ್ರ ಕಥೆ ಅಧ್ಯಯನ. ಸಂಪುಟ- ೧. ಮುನ್ನುಡಿ: ಪುಟ:೪

ಮಾಸ್ತಿ ಹೇಳುತ್ತಾರೆ 'ಅವರ ಆಸೆಯೇ ನನ್ನ ಜೀವನವನ್ನೆಲ್ಲಾ ರೂಪಿಸಿತು' ಎಂದು ಶಿವಾರ ಪಟ್ಟಣದ ಶಾಲೆಯಲ್ಲಿದ್ದ ನಾರಾಣಪ್ಪ ರವರೆಂಬ ವಿದ್ಯಾರ್ಥಿ ಹಿತಾಕಾಂಕ್ಷಿ,

ಸಾತ್ವಿಕ ಶಿರೋಮಣಿ ಹಾಗೂ ಸ್ವಾತಂತ್ರ್ಯ ಪ್ರೇಮಿ ಉಪಾಧ್ಯಾಯರಿಂದಾಗಿ ಅವರಿಗೆ ಕಾಳಿದಾಸನ ರಘುವಂಶದ ದಿಲೀಪ ಚರಿತೆ, ಅಜನೃಪ ಚರಿತೆ, ಗೋವಿನ ಕತೆ, ಹರಿಶ್ಚಂದ್ರೋಪಖ್ಯಾನ ಮುಂತಾದ ಉತ್ತಮ ಸಾಹಿತ್ಯದ ಪರಿಚಯವಾಯಿತು. ಹಾಗೆಯೇ ಮನೆಯಲ್ಲಿ ಸುಂದರಕಾಂಡ, ಬಿ. ವೆಂಕಟಾಚಾರ್ಯರ ಬಂಗಾಳಿ ಅನುವಾದಗಳು, ಆರ್ಯಕೀರ್ತಿ, ಪುರಂದರದಾಸರ ಹಾಡುಗಳು, ಜೈಮಿನಿ ಭಾರತ ಇವೆಲ್ಲವುಗಳನ್ನು ಓದುವ ಅವಕಾಶವಾಯಿತು. ಇದರಿಂದ ಬಾಲಕ ಮಾಸ್ತಿಗೆ ಎಳೆವೆಯಲ್ಲೇ ಸಾಹಿತ್ಯದಲ್ಲಿ ಆಸಕ್ತಿ ಮತ್ತು ಅಭಿರುಚಿಗಳು ಉಂಟಾದವು. ಕನ್ನಡ ಲೋಯರ್ ಸೆಕೆಂಡರ್ ಪರೀಕ್ಷೆಯಲ್ಲಿ ಮೊದಲ ದರ್ಜೆಯಲ್ಲಿ ಉತ್ತೀರ್ಣರಾದರು. ಮುಂದೆ ಮಳವಳ್ಳಿಯಲ್ಲಿ ಜಮೇದುದಾರರಾಗಿದ್ದ ಸೋದರ ಮಾವ ವೆಂಕಟರಾಮಯ್ಯಂಗಾರ್ ಮನೆಯಲ್ಲಿದ್ದುಕೊಂಡು ಇಂಗ್ಲೀಷ್ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಉತ್ತೀರ್ಣರಾದರು.

ಪ್ರೌಢ ಶಾಲಾ ವಿದ್ಯಾಭ್ಯಾಸಕ್ಕಾಗಿ ಮೈಸೂರಿನ ವೆಸ್ಲಿಯನ್ ಹೈಸ್ಕೂಲಿಗೆ ಸೇರಿದರು. ಅವರ ಮಾವನವರು ಮಾಸ್ತಿಯನ್ನು ಬಲ್ಲೇ ರಂಗಣ್ಣನವರ ಮನೆಯಲ್ಲಿ ವಾಸಕ್ಕಿಟ್ಟರು. ಆ ಮನೆಯಲ್ಲಿ ತುಂಬಾ ಜನರಿದ್ದರಿಂದ ಅವರ ತಾಯಿಗೆ ಈ ಹುಡುಗನೊಬ್ಬ ಹೊರೆಯಾದನೆಂದು ಅಸಮಾಧಾನ ಉಂಟಾಗಿ ಅದನ್ನು ಕಟುವಾಗಿ ಆಡಿಯೂ ಬಿಟ್ಟರು. ಅದರ ಪರಿಣಾಮ ರಂಗಣ್ಣನವರು ತಮ್ಮ ಮನೆಯೂ ಸೇರಿದಂತೆ ಏಳು ವಾರಾನ್ನದ ಮನೆಗಳನ್ನು ಗೊತ್ತು ಮಾಡಿಕೊಟ್ಟರು. ಹುಡುಗ ಮಾಸ್ತಿ ತಮ್ಮ ಬಡತನದಿಂದಾಗಿ ಎದುರಿಸಬೇಕಾಗಿ ಬಂದ ಈ ಹೀನಾಯ ಸ್ಥಿತಿಯಿಂದ ಬಿಡಿಸಿಕೊಳ್ಳುವುದು ಬದುಕಿನ ಮೊದಲ ಕರ್ತವ್ಯವೆಂದು ನಿಶ್ಚಯಿಸಿಕೊಂಡರು. ಅವರ ಈ ನಿಶ್ಚಯದ ಪರಿಣಾಮ ಮುಂದಿನ ವ್ಯಾಸಂಗದಲ್ಲೆಲ್ಲಾ ಕಂಡು ಬಂದು ಯಾವ ಪರೀಕ್ಷೆಗಳಲ್ಲೂ ಮೊದಲ ಸ್ಥಾನವನ್ನು ಯಾರಿಗೂ ಬಿಟ್ಟುಕೊಡಲಿಲ್ಲ.

ಮಾಸ್ತಿಯವರು ತಮ್ಮ ಜೀವನದಲ್ಲಿ ವಿದ್ಯಾಭ್ಯಾಸದ ಹಂತದಲ್ಲಿ ಬಂದ ದುಸ್ಥಿತಿಯನ್ನು ಈ ರೀತಿ ಸ್ವತಃ ತಾವೇ ಹೇಳಿಕೊಂಡಿದ್ದಾರೆ.

"ವಾರದ ಮನೆಗಳಲ್ಲಿ ಊಟ ಮಾಡಬೇಕಾಗಿ ಬಂದ ನಾನು ನನ್ನ ಸ್ಥಿತಿ ಎಷ್ಟು ಅಸಹಾಯ ಎನ್ನುವುದನ್ನು ಮನಗಂಡೆ, ನಾನು ಒಂದು ದೊಡ್ಡ ಮನೆತನದ ಮಗ ನಮ್ಮ ಹಿರಿಯರು ಬಹುಜನಕ್ಕೆ ಅನ್ನಹಾಕಿ ಹೆಸರು ಗಳಿಸಿದವರು.

ಈಗ ನನಗೆ ಇತರರು ಅನ್ನ ಹಾಕಬೇಕಾಗಿ ಬಂದಿತು. ಪುಣ್ಯವಂತರು ಮಕ್ಕಳನ್ನು ಹಾಸ್ಟಲಿನಲ್ಲೋ, ಒಂದು ಹೋಟೆಲಿನಲ್ಲೋ, ಇರಿಸಿ ನೋಡಿಕೊಳ್ಳುತ್ತಾರೆ. ನಮ್ಮ ತಂದೆ ನನ್ನನ್ನು ಹೀಗೆ ನೋಡಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಪಾಪ, ಇದರ ಹೀನಾಯ ನನಗೆ ಸೋಕಿದ್ದಕ್ಕಿಂತ ನಮ್ಮ ತಂದೆಗೆ ನಮ್ಮ ತಾಯಿಗೆ ಬಹು ಹೆಚ್ಚಾಗಿ ಸೋಕಿರಬೇಕು. ಸ್ಪಷ್ಟವಾಗಿ ಅಲ್ಲ, ಅಸ್ಪಷ್ಟವಾಗಿ, ನಾನು ಈ ಸ್ಥಿತಿಯಿಂದ ಬಿಡಿಸಿಕೊಳ್ಳುವುದು ಈ ಬದುಕಿನ ಮೊದಲ ಕರ್ತವ್ಯ ಎಂದು ನಿಶ್ಚಯಿಸಿಕೊಂಡೆ. ಈ ನಿಶ್ಚಯ ನನ್ನ ಮನಸ್ಸಿಗೆ ಬಂದದ್ದು ದೈವ ಕೃಪೆಯಿಂದ".೪

ಕಡಿಮೆ ಸಂಬಳ ಪಡೆಯುತ್ತಿದ್ದರೂ ತಮ್ಮ ಸಂಸಾರದ ಭಾರದ ಜೊತೆಗೆ ತಮ್ಮನಿಗೂ, ಸೋದರಳಿಯನಿಗೂ, ವಿದ್ಯಾಭ್ಯಾಸಕ್ಕಾಗಿ ಅದನ್ನು ಸಮಾಧಾನವಾಗಿ ಒಪ್ಪಿಕೊಂಡ ಅವರ ಹೆಂಡತಿ ಇಬ್ಬರನ್ನು ಮಾಸ್ತಿ ಅತ್ಯಂತ ಕೃತಜ್ಞತೆಯಿಂದ ನೆನೆಯುತ್ತಾರೆ.

**ಯೌವ್ವನ :**

ಮೆಟ್ರಿಕ್ಯುಲೇಷನ್ ಪರೀಕ್ಷೆ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾಗಿ ಮಹಾರಾಜ ಕಾಲೇಜಿನಲ್ಲಿ ಎಫ್.ಎ., ತರಗತಿಗೆ ಸೇರಿದರು. ಅಲ್ಲಿ ಅವರಿಗೆ ಬಿ.ಎಂ.ಶ್ರೀ, ಕಾನಕಾನಹಳ್ಳಿ ವರದಚಾರ್ಯರು, ಪಿ. ಆರ್. ಕರಿಬಸವಶಾಸ್ತ್ರಿಗಳು ಅವರೆಲ್ಲ ಅಧ್ಯಾಪಕರಾಗಿ ದೊರೆತರು. ಎಫ್. ಎ., ಪರೀಕ್ಷೆಯನ್ನು ಮೊದಲ ದರ್ಜೆಯಲ್ಲಿ ಪಾಸ್ ಮಾಡಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎ. ತರಗತಿಗೆ ಸೇರಿದರು. ಭೌತಶಾಸ್ತ್ರ, ರಾಸಾಯನಶಾಸ್ತ್ರ ಅವರ ಕಲಿಕೆಯ ವಿಷಯಗಳಾಗಿದ್ದವು. ಸೆಂಟ್ರಲ್ ಕಾಲೇಜ್ ದಿನಗಳು ಅವರ ಬದುಕಿನ ಮಹತ್ವಪೂರ್ಣ ದಿನಗಳು ಟೇಟ್ ಅವರಂತೂ ಶಿಷ್ಯ ವಾತ್ಸಲ್ಯ ಪ್ರಪೂರ್ಣರಾದ ಗುರುಗಳಾಗಿದ್ದರು. ಅವರಿಂದಾಗಿಯೇ ಯಾವುದೇ ವಿಷಯದಲ್ಲಿ ಯೋಚಿಸಿ, ತೀರ್ಮಾನ ಕೈಗೊಳ್ಳಬೇಕೆಂಬುದನ್ನು ಕಲಿತರು. ಮಾಸ್ತಿ ಅತ್ಯಂತ ಬುದ್ಧಿವಂತ ವಿದ್ಯಾರ್ಥಿಯೆಂದು ಹೆಸರು ಗಳಿಸಿದ್ದರು. ಮುಂದೆ ಟೇಟ್ ಸಾಹೇಬರು ಮಾಸ್ತಿಯವರನ್ನು ಇಂಗ್ಲೀಷ್ ಲೆಕ್ಚರರ್ ಆಗಿ ನೇಮಿಸಿದರು. ಮೂರು ತಿಂಗಳ ದುಡಿಮೆಯಿಂದ ಬಂದ ಮುನ್ನೂರು ರೂಪಾಯಿ ಮದ್ರಾಸಿನಲ್ಲಿ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಎಂ.ಎ., ವ್ಯಾಸಂಗಕ್ಕೆ ಸೇರಲು ಅನುಕೂಲವಾಯಿತು.

---

ಅಡಿ ಟಿಪ್ಪಣಿ ೪: ಮಾಸ್ತಿಯವರ ಸಮಗ್ರ ಕಥೆ ಅಧ್ಯಯನ. ಸಂಪುಟ– ೧. ಮುನ್ನುಡಿ:–ಪುಟ: ೪

ತಮ್ಮ ಅಪಾರ ಪರಿಶ್ರಮ ಮತ್ತು ಪ್ರತಿಭೆಯಿಂದ ಸಿವಿಲ್ ಸರ್ವೀಸ್ ಪರೀಕ್ಷೆಯಲ್ಲಿ ಪ್ರಥಮ ಸ್ಥಾನ ಪಡೆದರು. ತಿಂಗಳಿಗೆ ಇನ್ನೂರು ರೂಪಾಯಿ ಸಂಬಳದ ಮೇಲೆ ಅಸಿಸ್ಟೆಂಟ್ ಕಮೀಷನರ್ ಆಗಿ ನೇಮಕ ಹೊಂದಿದರು. ಅವರ ಬದುಕಿನ ಬವಣೆ ಅಲ್ಲಿಗೆ ನೀಗಿತು. ಮಾಸ್ತಿಯವರದು ಮೊದಲಿಂದಲೂ ಧ್ಯೇಯ ನಿಷ್ಠೆ ಬದುಕು, ಹಿಡಿದ ಗುರಿಯನ್ನು ಕೊನೆಯವರೆಗೂ ಛಲ ಹಿಡಿದು ಸಾಧಿಸುವುದು ಅವರಲ್ಲಿ ಎಳೆಯತನದಿಂದ ರೂಢ ಮೂಲವಾಗಿದ್ದ ಪ್ರವೃತ್ತಿಯನ್ನೇ ಮುಂದಿನ ಅವರ ವೃತ್ತಿ ಜೀವನದಲ್ಲಿ ಹಾಗೂ ಅವರ ಪ್ರವೃತ್ತಿಯಾದ ಸಾಹಿತ್ಯಕ ಜೀವನದಲ್ಲಿ ಕಾಣುತ್ತೇವೆ.

ಪ್ರಾಮಾಣಿಕತೆ ಮತ್ತು ಸ್ವಾಭಿಮಾನ ಎರಡೂ ಅವರ ವ್ಯಕ್ತಿತ್ವದ ಗುಣಗಳು. ಅವರ ಸ್ವಭಾವ ಯಾವತ್ತೂ ಸ್ನೇಹಶೀಲ, ಉದಾರ ನಡವಳಿಕೆ, ಸೌಜನ್ಯತೆ, ತಮಗೆ ನ್ಯಾಯವೆಂದು ಕಂಡದ್ದನ್ನು, ಸರಿಯೆನಿಸಿದ್ದನ್ನು ಮಾಡುವಲ್ಲಿ ಯಾರ ದಾಕ್ಷಿಣ್ಯಕ್ಕೂ ಒಳಗಾಗುತ್ತಿರಲಿಲ್ಲ. ನಿಯಮಕ್ಕೆ ವಿರುದ್ಧವಾದುದನ್ನು ಎಂದಿಗೂ ಮಾಡುತ್ತಿರಲಿಲ್ಲ. ಈ ಗುಣಗಳಿಂದಾಗಿ ಮಾಸ್ತಿಯವರು ತಮ್ಮ ಮೇಲಾಧಿಕಾರಿಗಳ ಗೌರವ, ಮೆಚ್ಚುಗೆ ಗಳಿಸಿದರು. ವೈವಿದ್ಯಮಯ ಆಡಳಿತಾನುಭವ, ಇದರ ವಿಸ್ತಾರವಾದ ನಿರೂಪಣೆ, ಅವರ ಆತ್ಮ ವೃತ್ತದ ಬರಹವಾದ 'ಭಾವ' ದಲ್ಲಿ ಬರುತ್ತದೆ. ಸರ್ಕಾರದ ಉನ್ನತ ಸ್ಥಾನದ ಜವಾಬ್ದಾರಿ, ಗೌರವ, ಮರ್ಯಾದೆ ಇವೆಲ್ಲವೂ ಅವರದಾಯಿತು.

ಮಾಸ್ತಿಯವರ ನಿಷ್ಠಾವಂತ ಸಂಸ್ಥಾನದ ಸೇವೆ ಮತ್ತು ಸ್ವಾತಂತ್ರ್ಯ ಹಾಗೂ ಸಾಮಾಜಿಕ ಸೇವೆಯನ್ನು ಮನ್ನಿಸಿ 'ರಾಜ ಸೇವಾ ಪ್ರಸಕ್ತ' ಎಂಬ ಬಿರುದನ್ನು ನೀಡಿ ಅವರ ಸಾಹಿತ್ಯ ಎಲ್ಲಾ ಕಾಲಕ್ಕೂ ಶಾಶ್ವತ ಎಂದು ಪ್ರಶಂಸೆ ಮಾಡಿದರು. ಅತ್ಯುನ್ನತ ಸ್ಥಾನವಾದ ಮಂತ್ರಿ ಪದವಿ, ಜಾತಿಯ ಕಾರಣದಿಂದಾಗಿ ಮಾಸ್ತಿಯವರ ಕೈ ತಪ್ಪಿ ಅವರಿಗಿಂತ ಕಡಿಮೆ ಅರ್ಹತೆಯವರಿಗೆ ಸಿಕ್ಕಿತು. ಅದರಿಂದ ಮಾಸ್ತಿಯವರು ನೊಂದು ತಮ್ಮ ನ್ಯಾಯಬದ್ಧ ಹಕ್ಕಿಗೆ ಚ್ಯುತಿ ಬಂದ ಸಂದರ್ಭದಲ್ಲಿ ಸ್ವಯಂ ನಿವೃತ್ತಿ ಪಡೆದರು.

ತಮ್ಮ ಪೂರ್ವಜರಾದ ಮಾಸ್ತಿ ಗ್ರಾಮದವರು ಬಳುವಳಿಯಾಗಿ ಬಿಟ್ಟ ಶ್ರೀ ವೈಷ್ಣವ ಮತ, ರಾಮಾಯಣ, ಮನೆ ದೈವ ತಿರುಪತಿ ವೆಂಕಟೇಶ್ವರ ಇಷ್ಟನ್ನು ಮಾತ್ರ ಆಸ್ತಿಯನ್ನಾಗಿ ಪಡೆದರು. ಮಾಸ್ತಿಯವರು ವೃತ್ತಿ ಜೀವನದಲ್ಲಿ ವಿವಿಧ ಸ್ಥಳಗಳಲ್ಲಿ ವಿವಿಧ ಪ್ರಕಾರದ ಜನಗಳೊಂದಿಗೆ ಕೆಲಸ ಮಾಡಬೇಕಾಗಿ ಬಂದಿದ್ದರಿಂದ ಅಪಾರ ಅನುಭವದ ಸಂಪತ್ತು ಅವರಿಗೊದಗಿತು.

ಅದು ಅವರ ಸಾಹಿತ್ಯ ರಚನೆಗೆ ಪ್ರೇರಣೆಯಾದುದಲ್ಲದೆ ವಸ್ತುವನ್ನು ಒದಗಿಸುವ ತವನಿಧಿಯಾಯಿತು. ೧೯೧೦-೧೧ರ ಸುಮಾರಿನಲ್ಲೇ ಅವರ ಮೊದಲ ಕಥೆ ರಂಗನ ಮದುವೆ ರಚನೆಯಾಗಿತ್ತು. ಮುದ್ದಣ್ಣನನ್ನು ಕುರಿತು ಇಂಗ್ಲೀಷ್‌ನಲ್ಲಿ ಲೇಖನ ಬರೆದಿದ್ದರು. ಜೊತೆಗೆ ಇಂಗ್ಲೀಷ್ ಭಾಷೆಯಲ್ಲಿ ಗಟ್ಟಿಗ ಎಂಬ ಭಾವನೆ ಇದ್ದುದರಿಂದ ಅದೇ ಭಾಷೆಯಲ್ಲಿ ಯಾಕೆ ಬರವಣಿಗೆ ಮುಂದುವರಿಸಬಾರದು ಎಂದಿದ್ದ ಸಮಯದಲ್ಲಿ ಕೋಲಾರ ತಾಲ್ಲೂಕು ಮಲ್ಲಸಂದ್ರ ಗ್ರಾಮದಲ್ಲಿ ಜಮಾಬಂಧಿ ಕಾಲದಲ್ಲಿ ಅವರಿಗಾದ ಒಂದು ಅನುಭವ ಅವರನ್ನು ಸಂಪೂರ್ಣವಾಗಿ ಕನ್ನಡದ ಕಡೆಗೆ ತಿರುಗಿಸಿ, ಏನೋ ಒಂದು ತಪ್ಪು ಮಾಡಿದ್ದ ರೈತನನ್ನು ಯಾಕಯ್ಯಾ ರೂಲ್ಸ್ ತಿಳಿದಿಲ್ಲವೇ ಎಂದು ಕೇಳಿದಾಗ ಆತ ಹೇಳಿದ ನಿಮ್ಮ ರೂಲ್ಸ್ ಗೀಲ್ಸ್ ಎಲ್ಲಾ ಇಂಗ್ಲೀಷಿನಲ್ಲಿದೆ ಸ್ವಾಮಿ, ನಾವೇನು ತಿಳಿದುಕೊಳ್ಳೋದು? ಎಂಬ ಒಬ್ಬ ರೈತನ ಮಾತು ಮಾಸ್ತಿಯವರ ಕಣ್ಣು ತೆರೆಸಿತು. ೧೯೨೦ರಲ್ಲಿ ಅವರ ಮೊದಲ ಕಥಾ ಸಂಕಲನ ಪ್ರಕಟವಾಯಿತು.

ಮಾಸ್ಥಿಯವರ ಸಾಹಿತ್ಯ ಪ್ರಜೆ ಕನ್ನಡ ನವೋದಯದೊಂದಿಗೆ ಮಾಸ್ತಿಯವರ ಬದುಕು ಬೆಸೆದುಕೊಂಡು ಬಿಟ್ಟಿತು. ಕನ್ನಡಕ್ಕಾಗಿ ಅವರ ಬದುಕು ಸಮರ್ಪಿತವಾಯಿತು. ಅವರು ಸರ್ಕಾರಿ ಸೇವೆಯಲ್ಲಿರುವಾಗಲೇ ಅವರ ಆರು ಕಥಾ ಸಂಕಲನಗಳು, ಕಿರು ಕಾದಂಬರಿ ಸುಬ್ಬಣ್ಣ, ಕಥನ ಕವನಗಳು, ಪ್ರಮುಖ ನಾಟಕಗಳು, ಆದಿಕವಿ ವಾಲ್ಮೀಕಿ, ವಿಮರ್ಶೆಯ ನಾಲ್ಕು ಭಾಗಗಳು ಇವೆಲ್ಲಾ ಪ್ರಕಟವಾದವು. ಮಾಸ್ತಿಯವರ ಸಾಹಿತ್ಯದಂತೆ ಅವರ ಬದುಕು ದೊಡ್ಡದು. ಅವರ ಬದುಕು ಒಂದು ಮಹಾಕೃತಿ. ಅವರ ಬದುಕಿಗೂ ಬರಹಕ್ಕೂ ಅಂತರ ಕಡಿಮೆ. ಬದುಕಿದಂತೆ ಬರೆಯಬೇಕು, ಬರೆದಂತೆ ಬದುಕಬೇಕು ಎನ್ನುವುದಕ್ಕೆ ಅವರು ಉತ್ತಮ ಉದಾಹರಣೆ.

ಉದಯೋನ್ಮುಖ ಲೇಖಕರಿಗೆ ಒತ್ತಾಸೆ ನೀಡುವ ಸಲುವಾಗಿ ಎಸ್.ಜಿ. ಶಾಸ್ತ್ರಿ, ಸಿ.ಬಿ. ರಾಮರಾಯರು ಮುಂತಾದವರ ಸಹಕಾರದಿಂದ ಲೇಖಕರ ಸಹಾಯ ನಿಧಿ ಸ್ಥಾಪಿಸಿ ಸೋದರ ಸಾಹಿತಿಗಳು ಬೆಳಕು ಕಾಣಲು ಕಾರಣರಾದರು. ಕುವೆಂಪು ಅವರ 'ಕೊಳಲು', ಬೇಂದ್ರೆಯವರ 'ಗರಿ', ಗೊರೂರು 'ಹಳ್ಳಿಯ ಚಿತ್ರಗಳು', ಪು. ತಿ. ನ. ಅವರ 'ಹಣತೆ' ಈ ಮೊದಲಾದ ಪುಸ್ತಕಗಳು ಈ ನಿಧಿಯಿಂದ ಪ್ರಕಟವಾದವು. ೧೯೬೮ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿ ಆಯ್ಕೆಯಾಗಿ ೪ ವರ್ಷಗಳ ಕಾಲ ಕೆಲಸ ಮಾಡಿದರು. ಅದುವರೆಗೆ ಕೇವಲ ೬೦೦ ಇದ್ದ ಸದಸ್ಯರ ಸಂಖ್ಯೆ ೨೪೦೦ಕ್ಕೆ ಏರಿತು. ಕರ್ನಾಟಕ ಏಕೀಕರಣ ಅವರ ಬಾಳಿನ ಉಸಿರಾಗಿತ್ತು.

[ಕನ್ನಡ ನಾಡು ನುಡಿಗೆ ಬಹುಮುಖ ಸೇವೆ ಸಲ್ಲಿಸಿ, ಕೀರ್ತಿ ಗಳಿಸಿದ ಮಾಸ್ತಿಯವರಿಗೆ ಹಲವು ಗೌರವ ಸ್ಥಾನಗಳು ಲಭಿಸಿವೆ. ೧೯೨೯ರಲ್ಲಿ ಬೆಳಗಾವಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಅವರನ್ನು ಅಧ್ಯಕ್ಷರನ್ನಾಗಿ ಆರಿಸಿ ಕನ್ನಡಿಗರು ಗೌರವ ತೋರಿದರು. ಅಲ್ಲಿನ ಅವರ ಅಧ್ಯಕ್ಷ ಭಾಷಣದಲ್ಲಿ 'ಕನ್ನಡ ಸೇವೆಯ' ಕಳಕಳಿ ಎದ್ದು ಕಾಣುತ್ತಿತ್ತು].

**ವೃದ್ಧಾಪ್ಯ:**

ನಮ್ಮ ಬಹುತೇಕ ಸಾಹಿತಿಗಳ ಜೀವನವನ್ನು ಅವಲೋಕಿಸಿದಾಗ ಅವರೆಲ್ಲಾ ತಮ್ಮ ಯೌವನದ ಕಾಲಘಟ್ಟದಲ್ಲಿ ಸಾಹಿತ್ಯ ರಚಿಸಿದ್ದರೂ ಕೂಡ ಅದರಲ್ಲಿ ಉತ್ಕೃಷ್ಟವಾದುದ್ದೇನಾದರೂ ಬಂದಿದ್ದರೆ ಅದು ಅವರ ವೃದ್ಧಾಪ್ಯದ ಅವಧಿಯಲ್ಲಿ ಎನ್ನಬಹುದು. ಅದೇ ರೀತಿಯಲ್ಲಿ ಮಾಸ್ತಿಯವರು ನಿವೃತ್ತಿಯ ನಂತರವೂ ತಮ್ಮೆಲ್ಲಾ ಶ್ರಮವನ್ನು ಸಾಹಿತ್ಯ ರಚನೆಗೆ ಮೀಸಲಿಟ್ಟರು. ಅವರ ಎರಡು ಪ್ರಸಿದ್ಧ ಕಾದಂಬರಿಗಳು, ಆರು ಕಥಾ ಸಂಕಲನಗಳು, 'ನವರಾತ್ರಿ', ಕಥಾನಕದ ಮೂರು ಭಾಗಗಳು', ಶ್ರೀರಾಮ ಪಟ್ಟಾಭಿಷೇಕ, ಕಾವ್ಯ ಈ ಮುಂತಾದ ಮುಖ್ಯ ಕೃತಿಗಳೆಲ್ಲಾ ರಚಿತವಾದದ್ದು ನಿವೃತ್ತಿಯ ನಂತರದಲ್ಲಿ.

ಸಂಪ್ರದಾಯದ ಮನೋಭಾವಕ್ಕೂ ಹೊಸ ಮೌಲ್ಯಗಳಿಗೂ ಘರ್ಷಣೆ ನಡೆದರೆ, ಮಾಸ್ತಿಯವರು ಬಹುಶ: ಸಂಪ್ರದಾಯಕ್ಕೆ ಒಲಿದಾರು. ಭಾವದ ಮುನ್ನುಡಿಯ ಕೊನೆಯಲ್ಲಿ ಹೀಗೆ ನುಡಿದಿದ್ದಾರೆ. ನನ್ನ ಬಾಳಿನ ತಪ್ಪೇನಾಗಿದೆ. ಅದಕ್ಕೆಲ್ಲಾ ನನ್ನ ಸ್ವಭಾವ ಕಾರಣ, ಒಳಿತೇನಾಗಿದೆ. ಅದೆಲ್ಲದರ ಕಾರಣ ದೈವಕೃಪೆ. ಮಾಸ್ತಿಯವರ ಕನ್ನಡ ಸೇವೆಗೆ ಯೋಗ್ಯ ಮನ್ನಣೆ ದೊರಕಿತು. ಮಾಸ್ತಿಯವರು ೧೯೨೯ ರಲ್ಲಿ ಬೆಳಗಾವಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ತಮ್ಮ ಅಧ್ಯಕ್ಷ ಭಾಷಣದಲ್ಲಿ ಕನ್ನಡದ ಬಗೆಗಿನ ತಮ್ಮ ನಿಷ್ಠೆ, ಕಳಕಳಿಯನ್ನು ವ್ಯಕ್ತಪಡಿಸಿದ್ದಾರೆ. ಅದರ ಸಾರಾಂಶ ಹೀಗಿದೆ. 'ನಮಗೆ ನಮ್ಮ ಭಾಷೆ ದೇವ ಭಾಷೆ' ಎಂಬ ಮಮತೆ ಇರಬೇಕು. ಸಂಸ್ಕೃತ ಭಾಷೆ ಮಾತ್ರ ಗೀರ್ವಾಣರ ಭಾಷೆಯಲ್ಲ. ನಮ್ಮ ಭಾಷೆಯೂ ಗೀರ್ವಾಣ ಭಾಷೆಯೇ.'

ವಿದ್ಯೆಯಿಂದ ಮನುಷ್ಯನಿಗೆ ಮುಖ್ಯವಾಗಿ ಭಾವವಿಕಾಸ ವಾಗಬೇಕು. ಇದು ಮಾತೃಭಾಷೆಯಿಂದಾಗುವಂತೆ ಇನ್ನು ಯಾವ ಭಾಷೆಯಿಂದಲೂ ಆಗಲಾರದು. ಆಡಳಿತ ಆದಷ್ಟು ಕನ್ನಡದಲ್ಲಿ ನಡೆಯಬೇಕೆಂದು ಅದಕ್ಕೆ ಈಗ ಅಡ್ಡಿಯಾಗಿರುವ ಸಮಸ್ಯೆಗಳಿಗೆ ಪರಿಹಾರ ಸೂಚಿಸಿದಂತಹವರು ಮಾಸ್ತಿ. ಕನ್ನಡ ನಾಡು ಸುಂದರ ನಾಡು, ಕನ್ನಡ ಮಾತು

ಸುಂದರವಾದ ಮಾತು ಎಂದು ಹೇಳಿದ ಮಾತ್ರಕ್ಕೆ ಅವರಿಗೆ ಅನ್ಯ ಭಾಷೆಗಳ ಮೇಲೆ ಅಸೂಯೆ ಇರಲಿಲ್ಲ. ಅವುಗಳನ್ನು ಕಲಿಯಬೇಕು, ಅವೂ ಬೆಳೆಯಬೇಕು, ಆದರೆ ನಮ್ಮ ಭಾಷೆ ಅದಕ್ಕಿಂತ ಹೆಚ್ಚು ಪಟ್ಟು ಬೆಳೆದಿರಬೇಕೆಂದು ತಿಳಿದಿದ್ದವರು.

೧೯೪೪–೧೯೬೫ ರಲ್ಲಿ 'ಜೀವನ' ಪತ್ರಿಕೆಯ ಸಂಪಾದನೆ, ಪ್ರಕಟಣೆ ೧೯೫೬ ರ ಮುಂಬೈಯಲ್ಲಿ ನಡೆದ ಅಖಿಲ ಭಾರತ ಲೇಖಕರ ಸಮ್ಮೇಳನದ ಅಧ್ಯಕ್ಷರು, ೧೯೪೮ ರಲ್ಲಿ ಮೈಸೂರಿನಲ್ಲಿ ಸಾರ್ವಜನಿಕ ಸನ್ಮಾನ, ೧೯೯೯ ರಲ್ಲಿ ಸಣ್ಣ ಕಥೆಗಳು ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ೧೯೭೦ರಲ್ಲಿ 'ಶ್ರೀನಿವಾಸ' ಅಭಿನಂದನಾ ಗ್ರಂಥ ಸಮರ್ಪಣೆ, ೧೯೭೮ ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಫಿಲೋಶಿಪ್, ೧೯೭೭ ರಲ್ಲಿ ಮೈಸೂರು ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ ಪದವಿ, ೧೯೮೩ ರಲ್ಲಿ ಇವೆಲ್ಲಕ್ಕೆ ಕಳಶವಿದ್ದಂತೆ ಮಾಸ್ತಿಯವರ ಸಮಗ್ರ ಸಾಹಿತ್ಯ ಸಾಧನೆಗೆ ಭಾರತೀಯ ಜ್ಞಾನಪೀಠ ಪ್ರಶಸ್ತಿ ಲಭಿಸಿತು. ೧೯೮೪ ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಸದಸ್ಯತ್ವ ಇವೆಲ್ಲ ಮಾಸ್ತಿಗೆ ನಾಡು ಸಲ್ಲಿಸಿರುವ ಮನ್ನಣೆಗಳು.

ಮಾಸ್ತಿಯವರ ಕೌಟುಂಬಿಕ ಬದುಕು ನೆಮ್ಮದಿಯಿಂದ ಕೂಡಿತ್ತು. ಬಿ.ಎ. ಓದುತ್ತಿರುವಾಗಲೇ ಮದುವೆಯಾಗಿದ್ದ ಅಂಬಿಲ್ ಕೃಷ್ಣಸ್ವಾಮಿ ಅಯ್ಯಂಗಾರ್ ರವರ ಮಗಳು ಪಂಕಜಮ್ಮ ನವರು ಎಲ್ಲಾ ಅರ್ಥದಲ್ಲಿಯೂ ಸಹಧರ್ಮಿಣಿ, ಅವರದು ಆದರ್ಶ ದಾಂಪತ್ಯ, ಆರು ಜನ ಹೆಣ್ಣು ಮಕ್ಕಳು ಒಟ್ಟಾರೆ ಮಾಸ್ತಿಯವರದು ಸಂತೃಪ್ತ ಬದುಕು. ೯೫ ವರ್ಷಗಳ ತುಂಬು ಬಾಳನ್ನು ಬಾಳಿ ೦೬–೦೬–೧೯೮೬ ರಂದು ತಾವು ಹುಟ್ಟಿದ ದಿನಾಂಕದಂದೇ ಇಹದ ಬದುಕನ್ನು ಮುಗಿಸಿ ಸಾವಿನಲ್ಲೂ ದಾಖಲೆ ಮಾಡಿದವರು ಮಾಸ್ತಿಯವರು.

ಮಾಸ್ತಿಯವರು ನಡೆ–ನುಡಿಗಳಲ್ಲಿ ಅತ್ಯಂತ ಸೌಜನ್ಯಶೀಲ, ತುಂಬ ಸಪ್ರರು, ಯಾರಿಗೂ ನೋವುಂಟು ಮಾಡಬಾರದೆಂಬ ಮನೋಭಾವ, ವೈಯಕ್ತಿಕ ಭಿನ್ನಾಭಿಪ್ರಾಯಗಳು, ಸ್ನೇಹ ವಿಶ್ವಾಸಗಳಿಗೆ ಎರಕವಾಗುವುದಕ್ಕೆ ಅವಕಾಶ ಕೊಡುತ್ತಿರಲಿಲ್ಲ. ಅತ್ಯಂತ ಪ್ರಾಮಾಣಿಕ, 'ನೇರ ನಡೆ ನುಡಿ' ಪರಂಪರಾಗತ ಧರ್ಮದಲ್ಲಿ ಪೂರ್ಣ ನಂಬುಗೆ ಹಾಗೆಂದು ಕುರುಡು ನಂಬಿಕೆ ಇರಲಿಲ್ಲ. ತಾವು ಭಾರತೀಯನಾಗಿರುವುದಕ್ಕೆ, ಹಿಂದೂವಾಗಿರುವುದಕ್ಕೆ ಅಪಾರ ಹೆಮ್ಮೆ. ಇಂತಹ ವ್ಯಕ್ತಿಯನ್ನು ಅಭ್ಯಸಿಸುವ ನಾವು ಅದರಲ್ಲಿನ ಕೆಲ ದೋಷವೆನಿಸಿದ ವಿಚಾರಗಳನ್ನು ಹೊರತು ಪಡಿಸಿ ನಾವೆಲ್ಲರೂ ತುಂಬ ಗೌರವಿಸಬಹುದಾದಂತಹ ವ್ಯಕ್ತಿತ್ವವುಳ್ಳವರಾಗಿದ್ದರು ಮಾಸ್ತಿಯವರು.೫

---

ಅಡಿ ಟಿಪ್ಪಣಿ ೫: ಮಾಸ್ತಿ– ರಾ.ಲಕ್ಷ್ಮೀನಾರಾಯಣ. ಕರ್ನಾಟಕ ಸಾಹಿತ್ಯ ಅಕಾಡೆಮಿ

ಮಾಸ್ತಿಯವರು ಪತ್ರಿಕೋದ್ಯಮಿಯೂ ಹೌದು. ೧೯೪೪ ರಿಂದ ೧೯೬೫ ರವರೆಗೆ 'ಜೀವನ' ಮಾಸ ಪತ್ರಿಕೆಯನ್ನು ಯಶಸ್ವಿಯಾಗಿ ನಡೆಸಿದರು. 'ಜೀವನ' ಪತ್ರಿಕೆಯ ಸಂಪಾದಕೀಯಗಳಲ್ಲಿ ಮೂಡಿದ ಸಾಹಿತ್ಯ, ಸಂಸ್ಕೃತಿ, ಕಲೆ, ರಾಜಕೀಯ, ಧರ್ಮ, ದೇವರು, ಸಾಮಾಜಿಕ, ಆರ್ಥಿಕ ವಿಚಾರ, ಮೊದಲಾದ ಹತ್ತು ಹಲವು ವಿಷಯಗಳ ಬಗೆಗಿನ 'ಜೀವನ ಸಂಪಾದಕೀಯ' ಎಂಬ ಹೆಸರಿನ ಗ್ರಂಥದಲ್ಲಿ ಪ್ರಕಟವಾಗಿವೆ.

ಅಲ್ಲದೆ ಮಾಸ್ತಿಯವರ ಕೃತಿಗಳು ಸಂಖ್ಯೆಯಲ್ಲಿ, ಸತ್ವದಲ್ಲಿ, ಗುಣದಲ್ಲಿ, ಗಾತ್ರದಲ್ಲಿ, ವೈವಿದ್ಯದಲ್ಲಿ ದೊಡ್ಡವು. ಕತೆ, ಕಾದಂಬರಿ, ಕಾವ್ಯ, ನಾಟಕ, ವಿಮರ್ಶೆ, ಆತ್ಮಕತೆ, ಜೀವನ ಚರಿತ್ರೆ, ಪ್ರಬಂಧ, ಜನಪದ, ವಿಚಾರ, ಸಾಹಿತ್ಯ ಮೊದಲಾದ ಪ್ರಕಾರಗಳ ೧೨೦ ಗ್ರಂಥಗಳನ್ನು ಬರೆದಿದ್ದಾರೆ.

ಜೊತೆಗೆ ಇಂಗ್ಲೀಷ ಭಾಷೆಯಲ್ಲಿಯೂ ೧೨ ಗ್ರಂಥಗಳನ್ನು ರಚಿಸಿದ್ದಾರೆ. ಇವರು ಸುಮಾರು ೭೦ ವರ್ಷಗಳು ತಮ್ಮ ಜೀವನವನ್ನು ಬರಹದ ಜೀವನ ಅಂದರೆ ಸಾಹಿತ್ಯ ಸೃಷ್ಟಿಗೆ ಮುಡಿಪಾಗಿಸಿದ್ದರು.ಒಟ್ಟಾರೆ ಅವರ ಬದುಕು-ಬರಹಗಳಿಂದ ಕನ್ನಡಕ್ಕೆ, ಕನ್ನಡಿಗರಿಗೆ, ಕನ್ನಡ ಸಾಹಿತ್ಯಕ್ಕೆ ಬೆಲೆ ಬಂದಿದೆ.

೨೨ ಟಿಪ್ಪಣಿ : ಸಾಲು ದೀಪಗಳು.ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು. ಮಾಸ್ತಿ ವೆಂಕಟೇಶ್ ಅಯ್ಯಾಂಗಾರ್, ಡಿ.ಲಿಂಗಯ್ಯ. ಪುಟ -೧೧೨

## ಅಧ್ಯಾಯ –೩

## ಮಾಸ್ತಿಯವರ ಕಥಗಳಲ್ಲಿನ ವಸ್ತು ವೈವಿಧ್ಯತೆ

'ಶ್ರೀನಿವಾಸ' ಎಂಬ ಕಾವ್ಯನಾಮದಿಂದ ಪ್ರಸಿದ್ಧರಾದ ಕನ್ನಡದ ಈ ಶತಮಾನದ ಮಹೋನ್ನತ ಲೇಖಕರಲ್ಲೊಬ್ಬರೆಂದು ಎಲ್ಲರಿಗೂ ಪ್ರಿಯರಾದ ಮಾಸ್ತಿಯವರು ತಮ್ಮ ವಿಶಿಷ್ಟ ಪ್ರತಿಭಾ ಪಾಂಡಿತ್ಯದಿಂದ ರಚಿಸಿದ ಕಥೆಗಳಿಂದಾಗಿ 'ಸಣ್ಣ ಕಥೆಗಳ ಜನಕ' ಎನಿಸಿದ್ದಾರೆ. ಇವರ ಕಥೆಗಳ ವೈವಿಧ್ಯತೆಯೆಂದರೆ ಹಾಸ್ಯ ಪ್ರಜ್ಞೆ ಮನುಷ್ಯ ಸ್ವಭಾವದಲ್ಲಿನ ವಿಶ್ವಾಸ, ಸಾಮಾನ್ಯ ಮನುಷ್ಯನ ಘನತೆಯಲ್ಲಿ ಗೌರವವನ್ನು ಪ್ರತಿಬಿಂಬಿಸುತ್ತವೆ. ಹಾಗೂ ಇವರ ಕಥಾ ಸಾಹಿತ್ಯವು ಅಚ್ಚ ಕನ್ನಡದ ಜೀವಂತ ಶೈಲಿ, ನವುರಾದ ನುಡಿಗಳನ್ನು, ಸಜ್ಜನಿಕೆಯ ಎಲ್ಲೆಯನ್ನು ಮೀರದ ಮರ್ಯಾದೆ ಬಹಳ ಸರಳವಾದರು ಬದುಕನ್ನು ಕುರಿತ ಅತ್ಯಂತ ಮಹತ್ವದ ಸಂಗತಿಗಳಿಂದ ಕೂಡಿರುತ್ತವೆ.

ಮಾಸ್ತಿಯವರ ಕಥಾ ಜಗತ್ತು ದಿಗ್ಭ್ರಮೆಗೊಳಿಸುವಷ್ಟು ಹಿರಿದಾದ್ದು, ವೈವಿಧ್ಯಪೂರ್ಣವಾದುದ್ದು, ವ್ಯಾಪಕವಾದದ್ದು. ಒಟ್ಟಾರೆ, ಹದಿನೈದು ಕಥಾ ಸಂಗ್ರಹಗಳಲ್ಲಿ ಒಂದುನೂರರ ಸಂಖ್ಯೆಯನ್ನು ತಲುಪಿರುವ ಈ ಕಥೆಗಳ ವಸ್ತು ವೈವಿಧ್ಯ ಅನಾದೃಷ್ಯವಾದುದ್ದಾಗಿದೆ. ಅವುಗಳಲ್ಲಿ ಸಮಾಜಿಕ, ಐತಿಹಾಸಿಕ, ಪೌರಾಣಿಕ, ಹೀಗೆ ಎಲ್ಲಾ ರೀತಿಯ ಕಥೆಗಳನ್ನು ಮಾಸ್ತಿ ಬರೆದಿದ್ದಾರೆ. ಒಂದೊಂದು ಕಥೆಯ ಮೂಲಕವು ಜೀವನದ ಬೇರೆ ಬೇರೆ ಮುಖಗಳ ದರ್ಶನವನ್ನು ಮಾಡಿಸುತ್ತಾ ಒಟ್ಟಾರೆಯಾಗಿ ಸಮೃದ್ಧ ಬದುಕಿನ ವೈವಿಧ್ಯಪೂರ್ಣ ಚಿತ್ರಣ ನೀಡುತ್ತಲೆ ಬದುಕಿನ ಸಮಗ್ರವಾದ ದರ್ಶನವನ್ನು ನೀಡುವುದರತ್ತ ಮಾಸ್ತಿಯವರ ಪ್ರಯತ್ನವಿದೆ.

ಸಮಾಜಿಕ ಸಮಸ್ಯೆಗಳು ಗಂಡು ಹೆಣ್ಣಿನ ಆಕರ್ಷಣೆಗಳು, ದಾಂಪತ್ಯದ ನೋವು ನಲಿವುಗಳು ಮನುಷ್ಯನ ಘನತೆ, ತ್ಯಾಗ, ನ್ಯಾಯಪರತೆ, ಔಧಾರ್ಯ, ಸ್ನೇಹ, ಪ್ರೀತಿ, ಮಾನವ ಕರುಣೆ, ಮನುಷ್ಯನ ಸ್ವಾರ್ಥ, ದೌರ್ಬಲ್ಯ, ಸಣ್ಣತನ ಇವುಗಳನ್ನು ಬಿಂಬಿಸುವಂತ ಕಥೆಗಳು, ಸಂಸ್ಕೃತಿ ದರ್ಶನದ ಚಿತ್ರಗಳು, ಪರಂಪರಾಗತ ಸದ್‌ಮೌಲ್ಯಗಳನ್ನು ಎತ್ತಿಹಿಡಿಯುವಂತಹ ಪ್ರಸಂಗಗಳ ಚಿತ್ರ, ಸಾರ್ಥಕ ಬದುಕಿನ ರೀತಿ

ಹೆಣ್ಣಿನ ಪಾತಿವ್ರತ್ಯ, ಮಮತೆ, ವಾತ್ಸಲ್ಯ, ಸಂಯಮ ಪ್ರೀತಿ ಇವುಗಳನ್ನು ಕೀರ್ತಿಸುವಂಥ ಸಂದರ್ಭದ ಚಿತ್ರಗಳು ಇವನ್ನೆಲ್ಲ ಮಾಸ್ತಿಯವರ ಕಥೆಗಳು ಒಳಗೊಳ್ಳುತ್ತವೆ.೧.

ತಮ್ಮ ಕಥೆಗಳಿಗೆ ಮಾಸ್ತಿಯವರು ಹಲವು ಕಡೆಗಳಿಂದ ವಸ್ತುವನ್ನು ಆರಿಸಿದ್ದಾರೆ. ಅಧ್ಯಯನದ ಅನುಕೂಲಕ್ಕಾಗಿ ನಾನು ಇವುಗಳನ್ನು ಮೂರು ಭಾಗಗಳಾಗಿ ವಿಂಗಡಿಸಿದ್ದೇನೆ. ೧) ಸಮಾಜಿಕ, ೨) ಚಾರಿತ್ರಿಕ, ೩) ಪೌರಾಣಿಕ'. ಇದು ಕೇವಲ ಸ್ಥೂಲ ವಿಂಗಡಣೆ ಅಷ್ಟೆ, ಮಾಸ್ತಿಯವರು ವಸ್ತುವನ್ನು ಆರಿಸುವ ಪರಿಸರವು ಅವರ ಕಥೆಗಳಲ್ಲಿ ಸೂಕ್ಷ್ಮವಾದ ಭಿನ್ನತೆಯನ್ನು ತೋರಿಸುವುದರಿಂದ ಮೇಲೆ ಹೇಳಿದಂತೆ ಕಥೆಗಳನ್ನು ವಿಂಗಡಿಸಿಕೊಂಡಿದ್ದೇನೆ.

ಈ ವಿಭಾಗಗಳಲ್ಲಿ ಬರುವ ಕತೆಗಳನ್ನು ಕಥಾ ವಸ್ತುವಿನ ಆಧಾರದ ಮೇಲೆ ವಿಂಗಡಿಸಿಕೊಂಡು ಅಧ್ಯಯನ ನಡೆಸಿದ್ದೇನೆ. ಮಾಸ್ತಿಯವರ ಕಥಾಲೋಕದಲ್ಲಿ ಎಲ್ಲಾ ಕಾಲಕ್ಕೂ ನಿಲ್ಲಬಲ್ಲ ಶ್ರೇಷ್ಠಗಳಿವೆ, ಸಮಾಜಿಕ ಕತೆಗಳಲ್ಲಿ ರಂಗಪ್ಪನ ಕಥೆಗಳು, ವೆಂಕಟಶಾಮಿಯ ಪ್ರಣಯ, ವೆಂಕಟಿಗನ ಹೆಂಡತಿ ಸುಬ್ಬಣ್ಣ, ಜೋಗ್ಯೋರ ಅಂಜಪ್ಪನ ಕೋಳಿಕತೆ, ಸುಬ್ಬಣ್ಣ, ಮೊಸರಿನ ಮೊಂಗಮ್ಮ ಇತ್ಯಾದಿ ಐತಿಹಾಸಿಕ ಕತೆಗಳಲ್ಲಿ ಬಾದಶಹನ ದಂಡನೆ, ಸಾರಿಪುತ್ರನ ಕಡೆಯ ದಿನಗಳು, ನಿಜಗಲ್ಲಿನ ರಾಣಿ, ಅಚಾರ್ಯರ ಪತ್ನಿ, ಕವಿಯ ಬಾಳ ಕೊನೆಯದಿನ, ಪಂಡಿತನ ಮರಣ ಶಾಸನ ಮೊದಲಾದವು. ಪೌರಾಣಿಕ ಎನ್ನಬಹುದಾದ ಕತೆಗಳಲ್ಲಿ- ಹೇಮಕೂಟದಿಂದ ಬಂದ ಮೇಲೆ, ಗೌತಮಿ ಹೇಳಿದ ಕತೆ, ಒಂದು ಹಳೆಯ ಕತೆ ಮಂತ್ರೋದಯ ಮೊದಲಾದವು. ಈ ಎಲ್ಲ ಕತೆಗಳು ಅವರ ಕಲೆಗಾರಿಕೆ ಮತ್ತು ಜೀವನ ದರ್ಶನ ಹಾಗೂ ಅವರು ಹೇಳುವ ರಸಾನುಭವ ಇವುಗಳನ್ನು ನಮ್ಮ ಅನುಭವಕ್ಕೆ ತಂದುಕೊಡುವ ಕತೆಗಳಿಗೆ ಉದಾಹರಣೆಗಳಾಗಿವೆ. ಇವುಗಳಲ್ಲಿ ಕೆಲವನ್ನು ವಿಶ್ಲೇಷಿಸಿ ನೋಡಬಹುದು.

ಮಾಸ್ತಿಯವರು ಸಮಕಾಲೀನ ಸಮಾಜದಿಂದ, ಚರಿತ್ರೆಯಿಂದ, ಪುರಾಣದಿಂದ ವಸ್ತುವನ್ನು ಆರಿಸುತ್ತಾರೆ. ವಸ್ತು ಸಮಕಾಲೀನವಾಗಲೀ, ಚಾರಿತ್ರಿಕವಾಗಲೀ ಅದನ್ನು ಒಂದು ಸಂಸ್ಕೃತಿಯ ಭಿತ್ತಿಯ ಮುಂದೆ ಪ್ರಧಾನವಾಗಿ ತೋರಿಸುತ್ತಾ ಬೇರೆ ಬೇರೆ

---

೨೮ [illegible] ಮಾಸ್ತಿ : ಡಾ. [illegible], ಪುಟ- [illegible]

ಸಂಸ್ಕೃತಿಯ ಜೀವನವನ್ನು ಅದಕ್ಕೆ ತೌಲನಿಕವಾಗಿ ಅನ್ವಯವಾಗುವಂತೆ ಚಿತ್ರಿಸುತ್ತಾರೆ. ಇದರಿಂದ ಹತ್ತು ರಾಷ್ಟ್ರಗಳ ಹತ್ತು ಕಾಲದ ಚರಿತ್ರೆಯ ಸಂಗತಿಗಳನ್ನು ವಸ್ತುವಾಗಿಸಿ ಆ ಮೂಲಕ ಸಂಸ್ಕೃತಿಯ ಮಹತ್ವವನ್ನು ಕೀರ್ತಿಸುವ ಧೋರಣೆಯನ್ನು ಮಾಸ್ತಿಯವರ ಈ ಬರಹಗಳಲ್ಲಿ ಕಾಣುತ್ತೇವೆ. ಈ ಕಾರಣದಿಂದ ನಾನು ಮಾಸ್ತಿಯವರ ಕತೆಗಳನ್ನು ಅಧ್ಯಾಯನ ಮಾಡುವಾಗ ವಸ್ತುವಿನ ದೃಷ್ಟಿಯಿಂದ ವಿಂಗಡಿಸಿಕೊಂಡಿದ್ದೇನೆ.

**೩.೧ <u>ಸಾಮಾಜಿಕ</u> <u>ಅಂಶಗಳನ್ನು</u> <u>ಒಳಗೊಂಡ</u> <u>ಕತೆಗಳು</u>.**

ಮಾಸ್ತಿಯವರ ಸಾಮಾಜಿಕ ಕತೆಗಳು ಅವರ ಚಾರಿತ್ರಿಕ ಮತ್ತು ಪೌರಾಣಿಕ ಕತೆಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಕಾಣಬರುತ್ತವೆ. ಮಾಸ್ತಿಯವರು ಸಾಮಾಜಿಕ ಕತೆಗಳಿಂದಲೇ ತಮ್ಮ ಕಥಾ ರಚನೆಯನ್ನು ಪ್ರಾರಂಭಮಾಡಿದ್ದಾರೆ. ಇಲ್ಲಿನ ಕಥೆಗಳನ್ನು ಹಿಂದೆ ಹೇಳಿದಂತೆ ವಸ್ತುವಿನ ಆಧಾರದ ಮೇಲೆ ವಿಂಗಡಿಸಿಕೊಳ್ಳಲಾಗಿದೆ.

ಅವರ ಮೊದಲ ಮೂರು ಕತೆಗಳು ಕನ್ನಡದ ಕತೆಗಳ ಚಾರಿತ್ರಿಕ ದೃಷ್ಟಿಯಿಂದ ಗಮನಾರ್ಹವಾಗುತ್ತದೆ. ಹಾಗೂ ಮಾಸ್ತಿಯವರ ಕಲೆಯ ಒಂದು ಮಟ್ಟದ ಸಿದ್ಧತೆಯನ್ನು ಸೂಚಿಸುತ್ತದೆ. ಇದರಿಂದಾಗಿ ಅವರ ಮೊದಲ ಮೂರು ಕಥೆಗಳಾದ 'ರಂಗನ ಮದುವೆ' 'ರಂಗಪ್ಪನ ದೀಪಾವಳಿ' ' ರಂಗಪ್ಪನ ಕೋರ್ಟ್ ಷಿಪ್' ಕತೆಗಳನ್ನು ಈ ವಿಭಾಗದಲ್ಲಿ ಬೇರೆಯಾಗಿ ಅಧ್ಯಾಯನ ನಡೆಸಲಾಗಿದೆ. ಇನ್ನು ಮುಂದೆ ಈ ಕತೆಗಳನ್ನು ಒಟ್ಟಿನಲ್ಲಿ 'ರಂಗಪ್ಪನ ಕತೆಗಳು' ಎಂದು ಕರೆಯಲಾಗುತ್ತದೆ. ಲೇಖಕರು ಯಾವ ತತ್ವಗಳನ್ನು ಹೇಳುವುದು ಇಲ್ಲಿ ಮುಖ್ಯವಾಗಿಲ್ಲದಿರುವುದೇ ಅಥವಾ ಹಾಗೆಂದು ತೋರುವಷ್ಟು ಸರಳವಾಗಿರುವುದರಿಂದಲೇ ಇವು ಹೆಚ್ಚು ಸಾರ್ಥಕ ಕತೆಗಳಾಗಿವೆ. ತತ್ವ ಒಂದೇ ಆದರೂ ಅದನ್ನು ಒಂದು ಹಳೆಯ ಕಥೆಗಿಂತ ರಂಗನ ಮದುವೆ ಚೆನ್ನಾಗಿ ಪ್ರತಿಪಾದಿಸುತ್ತದೆ.೨

ಮೊದಲ ಕತೆ '<u>ರಂಗನ ಮದುವೆ</u>'ಯಲ್ಲಿ ನಾಯಕ ರಂಗಪ್ಪ ತಾನು ಹುಟ್ಟಿ ಬೆಳೆದ ಸಮಾಜದ ರೀತಿನೀತಿಗಳಿಗೆ ವಿರೋಧವಾಗಿ ಯೋಚಿಸುವುದು, ತನ್ನ ಆಲೋಚನೆಯ ನಿರರ್ಥಕತೆಯನ್ನು ಅರಿಯುವುದು ಕತೆಯ ವಸ್ತುವಾಗಿದೆ. ಕತೆಯಲ್ಲಿ ಒಂದು ಪಾತ್ರವು ಆಗಿರುವ ಶಾಮಣ್ಣ ಎಂಬ ವಯಸ್ಸಾದ ಮಧ್ಯಮವರ್ಗದ ಗೃಹಸ್ಥ

---

ಅಡಿ ಟಿಪ್ಪಣಿ : ೨: [illegible] ಪ್ರಕಾಶನ. ಪುಟ-[illegible]

ಕತೆಯ ನಿರೂಪಕನಾಗಿದ್ದಾನೆ. ಆತ ತಾನು ಹುಟ್ಟಿ ಬೆಳೆದ ಸಮಾಜದ ನಂಬಿಕೆಗಳು, ಮೌಲ್ಯಗಳು ಸರ್ವಕಾಲಿಕ ಎಂದು ನಂಬಿದ ವ್ಯಕ್ತಿ.

ಆರಂಭದಲ್ಲಿ ಹೊಸಹಳ್ಳಿಯನ್ನು ಕುರಿತ ವಿವರಗಳು ಜನಗಳಿಗೆ ಹೊಸಹಳ್ಳಿ ತಿಳಿಯದಿದ್ದರು, ಅಲ್ಲಿನ ಜನಗಳಿಗೆ ಆ ಹಳ್ಳಿ ಆತ್ಮೀಯವಾದುದ್ದು ಎನ್ನುವುದನ್ನು ಸೂಚಿಸುತ್ತದೆ. ರಂಗ ಈ ಊರಿನಿಂದ ಇಂಗ್ಲೀಷ್ ಕಲಿಯಲು ಹೋಗುತ್ತಿರವ ಮೊದಲ ವ್ಯಕ್ತಿಯಾದ್ದರಿಂದ ಅವನ ತಂದೆ ಕರಣಿಕರು ಅವನನ್ನು ಧೈರ್ಯಮಾಡಿ ಕಳುಹಿಸುತ್ತಾರೆ. ಆಗ ಆ ಊರಿನಲ್ಲಿ ಇಂಗ್ಲೀಷ್ ಓದಿದವರು ಬಹುಜನ ಇರಲಿಲ್ಲ. ಎಂಬ ಈ ಮಾತು ಇಂಗ್ಲೀಷ್ ಕಲಿತ ರಂಗನಿಗೂ ಊರಿನವರಿಗೂ ಇರುವ ವ್ಯತ್ಯಾಸವನ್ನು ನವುರಾಗಿ ತಿಳಿಸುತ್ತದೆ.

ಇಂಗ್ಲೀಷ್ ಮಾತನಾಡುವವರು ಅಲ್ಲಿನ ಜನದಿಂದ ಹೇಗೆ ಭಿನ್ನರಾಗುತ್ತಾರೆ ಎನ್ನುವುದು ಸೌದೆಯವಳ ಪ್ರಸಂಗದಿಂದ ತಿಳಿಯುತ್ತದೆ. ನಿರೂಪಕರೇ ಇಂಗ್ಲೀಷನ್ನು 'ಅಮೂಲ್ಯವಾದ ಕೀಷುಬಾಷು' ಎಂದು ವ್ಯಂಗದ ದನಿಯಲ್ಲಿ ಕರೆಯುವುದು ಇದಕ್ಕೆ ಪೋಷಕವಾಗುತ್ತದೆ. ಇಂಗ್ಲೀಷು ಕಲಿತ ರಂಗ ಅನ್ಯ ಸಂಸ್ಕೃತಿಯೊಂದರ ಅನುಕರಣೆಯಿಂದಾಗಿ ತಾನು ಹುಟ್ಟಿದ ಊರಿನ ಜನರಿಂದ ಭಿನ್ನವಾಗುತ್ತಾನೆ, ಪ್ರದರ್ಶನದ ವಸ್ತುವಾಗುತ್ತಾನೆ. ಆದರೆ ರಂಗ ಈ ಅನ್ಯ ಸಂಸ್ಕೃತಿಯ ಪ್ರಭಾವದಿಂದ ಬಾಹ್ಯ ಚರ್ಯೆಯಲ್ಲಿ ಬದಲಾಗಿರುವುದಿಲ್ಲ.

ರಂಗ ಬಾಹ್ಯ ಚರ್ಯೆಯಲ್ಲಿ ಬದಲಾಗಿದ್ದರೂ ಮಾನಸಿಕವಾಗಿ ಹೊಸ ಆಲೋಚನೆಗಳಿಂದ ಬದಲಾಗಿದ್ದಾನೆ. ಈ ಬದಲಾವಣೆಯ ಮೇಲೆ ಇಂಗ್ಲೀಷ್ ಸಂಸ್ಕೃತಿಯ ಪ್ರಭಾವವಿದೆ. ಮದುವೆಯ ಬಗೆಗೆ ಯುವಕನಾದ ಈತ ಹೊಸ ರೀತಿ ಆಲೋಚನೆಯಲ್ಲಿ ತೊಡಗಿದ್ದಾನೆ. " ನನಗೆ ಸರಿಯಾದ ಹುಡುಗಿ ಸಿಕ್ಕ ಬೇಕು ನಮ್ಮ ಸಾಹೇಬರು ಒಬ್ಬರು ಇದ್ದಾರೆ, ಅವರು ಮದುವೆ ಮಾಡಿಕೊಂಡುದು ಆರು ತಿಂಗಳ ಹಿಂದೆ, ಅವರಿಗೆ ಸುಮಾರು ೩೦ ವರ್ಷ, ಅವರ ಹೆಂಡತಿಗೆ ೨೫ ವರ್ಷವಂತೆ. ಅವರು ಪ್ರೇಮವಾಗಿ ಮಾತಾಡಿಕೊಳ್ಳಬಲ್ಲರು. ನಾನು ಒಬ್ಬ ಸಣ್ಣ ಹುಡುಗಿಯನ್ನು ಮದುವೆ ಮಾಡಿಕೊಂಡೆನೆನ್ನಿ, ಏನಾದರು ಪ್ರೇಮವಾಗಿ ಮಾತನಾಡಿದರೆ ಅವಳು ಬೈದನೆಂದೇ ತಿಳಿದುಕೊಳ್ಳಬಹುದು ................, ಮದುವೆಯಾದರೆ ವಯಸ್ಸಾದ

ಹುಡುಗಿಯನ್ನೇ ಮದುವೆಯಾಗಬೇಕು" ಎಂಬ ರಂಗನ ಮಾತುಗಳಿಂದ ಆತನ ಆಲೋಚನೆ ಆತ ಹುಟ್ಟಿ ಬೆಳೆದ ಸಮಾಜದ ಆಲೋಚನೆಗಿಂತ ಭಿನ್ನವಾಗಿದೆ ಎನ್ನುವುದು ತಿಳಿಯುತ್ತದೆ. ಈ ಆಲೋಚನೆ ಕೇವಲ ಅವನ ವೈಯಕ್ತಿಕ ಅಭಿಪ್ರಾಯವಾಗದೆ ಸಮಾಜದ ಬಗೆಗೆ ಟೀಕೆಯಾಗಿಯೂ ಬರುತ್ತದೆ.

ರಂಗ ತನ್ನ ಸಂಸ್ಕೃತಿಯ ಮೌಲ್ಯಗಳಿಗಿಂತ ಭಿನ್ನವಾಗಿ ಆಲೋಚಿಸುತ್ತಿರುವಾಗ ಆತನು ಹುಟ್ಟಿ ಬೆಳೆದ ಸಮಾಜದಲ್ಲಿ ಅದರ ನಿರರ್ಥಕತೆಯನ್ನು ಅವನಿಗೆ ತಿಳಿಯಪಡಿಸುವ ಉಪಾಯವನ್ನು ನಿರೂಪಕರು ಮಾಡುತ್ತಾರೆ. ಅವನು ಹೇಳುವಾಗ ಅವನಿಗೆ ವಿರೋಧವಾಗಿ ರತ್ನಳನ್ನೇ ಒಪ್ಪುವಂತೆ ಮಾಡುವಲ್ಲಿ ಈ ಉಪಾಯ ಪ್ರಕಟವಾಗುತ್ತದೆ. ಅವನ ಮಾತಿನಲ್ಲಿನ ಮೆಚ್ಚಿ ಮದುವೆಯಾಗಬೇಕು ಎನ್ನುವುದನ್ನೂ ಪೂರೈಸುತ್ತಾರೆ.

ಇದಕ್ಕೆ ಅವರು ತಮಗೆ ಆಪ್ತಳಾದ ಹನ್ನೊಂದು ವರ್ಷದ ಹುಡುಗಿಯನ್ನು ಆಯ್ಕೆ ಮಾಡುತ್ತಾರೆ. ತನ್ನ ಅಭಿಪ್ರಾಯಕ್ಕೆ ವಿರುದ್ಧವಾಗಿ ರಂಗ ತನಗೆ ಒಪ್ಪಿತವಾದ ಆ ಹುಡುಗಿಯನ್ನೇ ಮದುವೆಯಾಗುತ್ತಾನೆ. ಇದರಿಂದ ಉಂಟಾದ ಯಶಸ್ಸು ನಿರೂಪಕರ ಯಶಸ್ಸೆ ಅಲ್ಲದೇ ಅವರು ನಂಬಿದ ಮೌಲ್ಯಗಳ ಯಶಸ್ಸು ಆಗುತ್ತದೆ.

ಮಾಸ್ತಿಯವರು ಈ ಕಥೆ ಬರೆಯುವ ಕಾಲ, ಭಾರತೀಯ ಭಾಷೆಗಳ ಮೇಲೆ ಇಂಗ್ಲೀಷ್ ಭಾಷೆ ಹಾಗೂ ಭಾರತೀಯ ಸಂಸ್ಕೃತಿಯ ಮೇಲೆ ಇಂಗ್ಲೀಷ್ ಸಂಸ್ಕೃತಿ ಪ್ರಭಾವ ಬೀರುತ್ತಿದ್ದುದರಿಂದ ತಮ್ಮ ಸಂಸ್ಕೃತಿ ಸ್ವಂತಿಕೆಯನ್ನು ಉಳಿಸಿಕೊಳ್ಳಲು ಜನ ಹೋರಾಡಬೇಕಾಗಿದ್ದ ಕಾಲವಾಗಿರಬಹುದು. ಮಾಸ್ತಿಯವರ ಈ ಕತೆಗಳು ಅದನ್ನು ಸೂಚಿಸುತ್ತದೆ.

ಮುದುಕಮ್ಮ ರಂಗನನ್ನು ದೃಷ್ಟಿಸಿ ನೋಡಿ "ಜನಿವಾರ ಇನ್ನೂ ಇದೆ; ಜಾತಿ ಕೆಡಿಸಿಲ್ಲ", ಎನ್ನುವಳು ಇದು ಸಂಪ್ರದಾಯಕ್ಕೆ ನಿಷ್ಠತೆಯಿಂದ ಇರುವುದನ್ನು ತೋರಿಸಿಕೊಡುತ್ತದೆ. ಅಂದರೆ ವಿದ್ಯಾಭ್ಯಾಸಕ್ಕೆಂದು ಹೊರಗಡೆ ಹೋಗಿ ಬಂದ ನಂತರವು ತನ್ನ ಆಚಾರ-ವಿಚಾರ, ನಡೆ-ನುಡಿಗಳಲ್ಲಿ ಏನು ರಂಗ ಬದಲಾವಣೆ ಮಾಡಿಕೊಳ್ಳಲಿಲ್ಲ ಎಂದು ತಿಳಿಸುತ್ತದೆ.

ಎರಡನೇ ಕತೆಯಾದ '<u>ರಂಗಪ್ಪನ ದೀಪಾವಳಿ</u>' ರಂಗನ ಮದುವೆಯ ಮುಂದುವರಿಕೆಯಾಗಿದೆ. ಇಲ್ಲಿ ಪ್ರೀತಿ, ಪ್ರೇಮ, ಪ್ರಣಯಕ್ಕೆ ವಯಸ್ಸಿನ ಮಿತಿಯಿಲ್ಲ. ಆಸ್ವಾದಿಸುವ ಮನಸ್ಸು ಮುಖ್ಯ ಎಂಬುದು ತಿಳಿಸುತ್ತದೆ. ಅಲ್ಲದೆ ನವ ವಿವಾಹಿತರಲ್ಲಾಗುವ ಸಹಜ ಭಾವನೆಗಳ ಸರಸ ಸಲ್ಲಾಪ ಚಿತ್ರನ ಮೂಡಿ ಬರುತ್ತದೆ. ರಂಗನ ದೀಪಾವಳಿಯಂದು ನಡೆದ ಘಟನೆಗಳನ್ನು ಕಟ್ಟುತ್ತಾ ಆ ಮೂಲಕ ರಂಗನಿಗಾದ ಅನುಭವ ನಿರೂಪಕರು ಹೇಳುತ್ತಾರೆ. ಇಲ್ಲಿ ಬರುವ ಅಮ್ಮಯ್ಯನ ಪಾತ್ರ ಕತೆಯ ತಾಂತ್ರಿಕ ಪೂರೈಕೆಯಾಗಿ ಬಂದಿದೆ. ರಂಗಪ್ಪನ ದೀಪಾವಳಿಗೆ ನಿರೂಪಕರು ಹೋಗಲು ಸಾಧ್ಯವಿಲ್ಲದ್ದರಿಂದ ದೀಪಾವಳಿಗೆ ರಂಗಪ್ಪನ ತಂಗಿ ಅಮ್ಮಯ್ಯ ಹೋಗಿ ಬಂದು ಅಲ್ಲಿನ ಕತೆಯನ್ನು ನಿರೂಪಕರಿಗೆ ಹೇಳಿದಂತಹ ತಂತ್ರವಿದೆ.

ಈ ಕತೆಯಲ್ಲಿ ರಂಗ ತನ್ನ ಮಾವನ ಮನೆಗೆ ಹೋಗಿ ನೈಜ ಸನ್ನಿವೇಶಗಳನ್ನು ಎದುರಿಸುವುದರ ಮೂಲಕ ತನ್ನ ಸಾಮಾಜಿಕ ಮೌಲ್ಯಗಳಿಗೆ ಕೊಂಚ ಹತ್ತಿರ ಬರುತ್ತಾನೆ. ಮದುವೆಯ ದಿನ ಹೆಂಡತಿಯನ್ನು ಮಾತಾಡಿಸಬೇಕೆಂಬ ರಂಗಪ್ಪನ ಬಯಕೆ ನಡೆಯದುದ್ದರಿಂದ ಮೊದಲ ಕತೆಯಲ್ಲಿನ ಆತನ ಅಭಿಪ್ರಾಯ ಗಟ್ಟಿಗೊಂಡಂತೆ ಅವನಿಗೆ ಕಾಣುತ್ತದೆ. "ನಾನು ಏನನ್ನು ಹೇಳುವುದು ಆ ಹುಡುಗಿಯರಿಗೆ ? ನಾವು ಏನಾದರು ಹೇಳಿದರೆ, ಅವರಿಗೆ ತಿಳಿಯುವ ಬಗೆ ಹೇಗೆ ?".೩ ಎಂದು ರಂಗನಿಗೆ ಅನಿಸುತ್ತದೆ. ಅದಕ್ಕೆ ಪ್ರತಿಕ್ರಿಯೆಯಾಗಿ ಆತನ ಹೆಂಡತಿ "ಬೆಳಿಗ್ಗೆ ಮನೆಗೆ ಬಂದವರು ನನ್ನ ಕೂಡ

---

[illegible] ಕತೆಗಳು [illegible]

ಮಾತನಾಡುವುದಕ್ಕೆ ಈಗಲೇ ಬರುವುದು?[೪] ಎಂದು ಕೇಳಿದಾಗ ಉತ್ತರ ಕೊಡಲಾರದೆ ಹೋಗುತ್ತಾನೆ.

ಇಷ್ಟಾದರು ಒಬ್ಬಳೇ ಸಿಕ್ಕಾಗ ಆಕೆಯನ್ನು ಮಾತನಾಡಿಸುತ್ತಾನೆ ಆಗಲೂ ಅವನಿಗೆ ಉತ್ತರ ಸುಲಭವಾಗಿ ಸಿಗುವುದಿಲ್ಲ. ಆದರೆ ಕೊನೆಯಲ್ಲಿ ಆತನ ಹೆಂಡತಿ ರತ್ನಮ್ಮ ಆಡುವ ಮಾತುಗಳು ಕತೆಯಲ್ಲಿ ಮುಖ್ಯವಾಗುತ್ತದೆ. ರಂಗಪ್ಪ ಆ ವರೆವಿಗೆ ಇಟ್ಟುಕೊಂಡಿಲ್ಲ ಅಭಿಪ್ರಾಯ ತಪ್ಪು ಎಂದಾಗುತ್ತದೆ. ಈ ಮಾತಿನಿಂದ ಚಿಕ್ಕ ಹುಡುಗಿಯಾದರು ರತ್ನಳೂ ಒಬ್ಬ ಭಾವನೆಯುಳ್ಳ ವ್ಯಕ್ತಿ ಎಂದು ರಂಗಪ್ಪ ಅರಿಯುತ್ತಾನೆ.

"ರಂಗಪ್ಪನ ಕೋರ್ಟ್‌ಷಿಪ್" ಒಂದು ರೀತಿಯಲ್ಲಿ ರಂಗಪ್ಪ ತನ್ನ ಹೆಂಡತಿಗೆ ಪ್ರೇಮ ಪತ್ರಗಳನ್ನು ಬರೆಯಲು ಕಲಿಸಿಕೊಡುವ ಅವನ ಕೊನೆಯ ಕತೆ ಆಗಿದೆ. ಕೋರ್ಟ್‌ಷಿಪ್ ಎಂದರೆ ಪ್ರೀತಿಯ ಮಾತು, ಪ್ರೀತಿಯಿಂದ ಭೇಡಿಸುವಿಕೆ ಹಾಸ್ಯ ಮಿಶ್ರಿತವಾಗಿರುತ್ತದೆ. ಈ ಕತೆಯಲ್ಲಿ ಪತ್ರದೊಡನೆ ಪ್ರೀತಿ ಹಂಚಿಕೆಯ ಆ ಕಾಲಘಟ್ಟದ ಮಾಧ್ಯಮವನ್ನು ತಿಳಿಸುತ್ತದೆ. ಸ್ತ್ರಿ ಸ್ಥಾನಮಾನ, ಗಂಡ-ಹೆಂಡತಿಯರ ನಡುವಿನ ಸರಸ, ವಿರಸ ಸೇರಿ ಸಮರಸವಾಗುವಿಕೆ ಸಂಬಂಧ ಗಟ್ಟಿಯಾಗುವಿಕೆಯನ್ನು ತಿಳಿಸುತ್ತದೆ. ಮೊದಲ ಕತೆಯಲ್ಲಿನ ಚಿಕ್ಕ ಹುಡುಗಿಯರು "ಬೆರಳು ಚೀಪಲು ಬಾರದವರು" ಎಂಬ ರಂಗನ ಅನಿಸಿಕೆ ಸುಳ್ಳಾಗುವ ಸಂದರ್ಭ ಇದು. ರಂಗಪ್ಪನ ಈ ಅನುಭವ ಬೇರೆಯ ಸಂಸ್ಕೃತಿಯ ಜನಗಳನ್ನು ನೋಡುವುದರಿಂದ ಬಂದದ್ದಾಗಿದೆ. ಇಂಗ್ಲೀಷ್ ಜನರು ವಯಸ್ಸಾದ ನಂತರ ಮದುವೆಯಾಗುವುದರಿಂದ ಅವರು ಪ್ರೇಮವಾಗಿ ಮಾತನಾಡಿಕೊಳ್ಳಬಲ್ಲರು, ನಮ್ಮಲ್ಲಿ ಹಾಗಾಗುತ್ತಿಲ್ಲವಾದ್ದರಿಂದ ನಾವೂ ವಯಸ್ಸಾದ ನಂತರ ಮದುವೆಯಾಗಬೇಕು ಎನ್ನುವುದು ರಂಗನ ಅನಿಸಿಕೆಯಾಗಿತ್ತು.

ಇಲ್ಲಿ ರಂಗನ 'ಕೋರ್ಟ್‌ಷಿಪ್'ಗೂ ಇಂಗ್ಲೀಷ್ ನವರ ಕೋರ್ಟ್‌ಷಿಪ್‌ಗೂ ಇರುವ ವ್ಯತ್ಯಾಸ ಅಲ್ಲಿನ ಸಂಸ್ಕೃತಿಯಿಂದ ಮೂಡುತ್ತದೆ. "ಪರಂಗಿಯವರು ಮದುವೆಯಾಗುವುದಕ್ಕೆ ಮೊದಲು ಪ್ರೀತಿ ಮಾತು ಹೇಳಿ ಮೆಚ್ಚುವಂತೆ

---

ಅಡಿ ಟಿಪ್ಪಣಿ : ೪: ಕೆಲವು ಸಣ್ಣ ಕತೆಗಳು (ಬೆಂಗಳೂರು,೧೯೨೦) ಪುಟ-೨೩

ಮಾಡುವುದಕ್ಕೆ ಅಂತ ಕೊಂಚ ದಿನ ಇಟ್ಟುಕೊಳ್ಳುತ್ತಾರಂತೆ. ಇದಕ್ಕೆ ಕೋರ್ಟ್‌ಷಿಪ್ ಎಂದು ಹೆಸರು”[೫] ಆದರೆ ರಂಗಪ್ಪನ ಕೋರ್ಟ್‌ಷಿಪ್ ಆರಂಭವಾಗುವುದು ಮದುವೆಯ ನಂತರ ಆದರು ರಂಗಪ್ಪ ತಿಳಿದಿರುವಂತೆ ಪ್ರೀತಿಯ ಮಾತು ಪತ್ರದಿಂದ, ಹೇಳುವುದರಿಂದ ಬರದೆ, ನಡವಳಿಕೆಯಲ್ಲಿ ಸೂಚಿತವಾಗುತ್ತದೆ ಎನ್ನುವ ಆಶಯ ನಿರೂಪಕರ ಮಾತಿನ ಹಿಂದಿರುವುದು ಈ ಮೂಲಕ ತಿಳಿದು ಬರುತ್ತದೆ.

ಒಟ್ಟಿನಲ್ಲಿ ಕನ್ನಡ ಸಣ್ಣಕತೆಯ ಪ್ರಾರಂಭದ ಯುಗದಲ್ಲಿ ರಚಿತವಾಗಿರುವ ಈ ಕತೆಗಳು ವಿವರಗಳಲ್ಲಿ ಅಲ್ಲಲ್ಲಿ ಸ್ವಲ್ಪ ಹರಡಿಕೊಂಡಂತೆ ಕಂಡರು ಒಟ್ಟಿನಲ್ಲಿ ಆ ಸಮಾಜದ ಚಿತ್ರ ಕೊಡುವಲ್ಲಿ ಯಶಸ್ವಿಗೊಂಡಿದೆ. ಜೊತೆಗೆ ಆರಂಭದ ಕತೆಗಳಲ್ಲೇ ಮಾಸ್ತಿಯವರು ಕತೆಯ ಕಲಾತ್ಮಕತೆಯ ಬಗೆಗೆ ವಹಿಸಿರುವ ಶ್ರದ್ಧೆ, ಎಚ್ಚರ, ಅವರ ಕಥನ ಶಕ್ತಿಯನ್ನು ಎತ್ತಿ ತೋರಿಸುತ್ತದೆ.

ಮೊದಲನೆಯ ಕಥಾ ಸಂಕಲನದಲ್ಲಿಯೇ ಬರುವ ‘ರಂಗಸ್ವಾಮಿಯ ಅವಿವೇಕ’ ಎಂಬ ಕತೆಯನ್ನು ಅವರ ಮೊದಲ ಕತೆಗಳೊಂದಿಗೆ ನೋಡಬಹುದು. ಕಾರಣ ಮೊದಲ ಕತೆಗಳ ನಾಯಕ ತನ್ನ ಅಭಿಪ್ರಾಯಗಳ ನಿರರ್ಥಕತೆಯನ್ನು ರಿಯುವುದು ಉಳಿದ ಕಥೆಗಳ ವಸ್ತುವಾಗಿರುವಂತೆ ಇಲ್ಲಿಯೂ ಅದೇ ವಸ್ತುವಾಗಿದೆ. ಓದಿನಿಂದ ಪಡೆದುಕೊಂಡ ತನ್ನ ಅಭಿಪ್ರಾಯಗಳನ್ನು ನಿಜಜೀವನದಲ್ಲಿ ತರಲು ಹೋಗುವ ಅವಿವೇಕವನ್ನು ಇಲ್ಲಿನ ನಾಯಕ ತೋರಿಸುತ್ತಾನೆ. ರಂಗಪ್ಪನ ಆಲೋಚನೆಯಲ್ಲಿ ಅವಲೋಕನದಿಂದ ರೂಢಿಸಿಕೊಂಡ ವಿಚಾರಗಳಿಗೂ ನಿಜಜೀವನದ ವಾಸ್ತವಿಕ ಸಂಗತಿಗಳೂ ಕಂದಕವಿದ್ದರೆ ಇಲ್ಲಿ ಪುಸ್ತಕ ಪ್ರಪಂಚಕ್ಕೂ ಜೀವನಕ್ಕೂ ಇರುವ ಕಂದಕವನ್ನು ಕತೆಗಾರರು ಸೂಚಿಸುತ್ತಾರೆ.

ರಂಗಸ್ವಾಮಿಗೆ ತನ್ನ ಹೆಂಡತಿ ಸೀತೆ ತನಗೆ ಅರ್ಹಳಾಗಿ ಕಾಣಲಿಲ್ಲ. ಈ ಕತೆಯಲ್ಲಿ ಶ್ರೀನಿವಾಸರು, ಮನುಷ್ಯ ಸಣ್ಣ ವಿಷಯಕ್ಕೆ ಅಪಾರ್ಥವನ್ನು ಕಲ್ಪಿಸಿಕೊಂಡು ಹೇಗೆ ಗುಂಡಿಗೆ ಬೀಳುತ್ತಾನೆ ಎಂಬುದನ್ನು ಚೆನ್ನಾಗಿ

---

[illegible] ಕತೆಗಳು ([illegible]೨೦) ಪುಟ-[illegible]

ತೋರಿಸಿದ್ದಾರೆ. ಕೊನೆಯಲ್ಲಿ ಗಂಡನ ಸ್ನೇಹಿತನೆಂದು ಮನೆಗೆ ಬಂದಾತನಿಗೆ 'ಕಾಫಿ ಮಾಡಲೆ' ಎಂದು ಹೆಂಡತಿ ಕೇಳಿದರೆ ಅವಳಿಗೆ ತನ್ನಲ್ಲಿ ಪ್ರೇಮವಿದೆ ಎಂದು ರಂಗಸ್ವಾಮಿಯೂ ಭಾವಿಸುವುದೂ.೬ ಆತ್ಮ ಅವಿವೇಕತನಕ್ಕೆ ಕನ್ನಡಿ ಹಿಡಿದಂತಿದೆ.

ಈ ಕತೆಯ ನಾಯಕನಾದ ರಂಗಸ್ವಾಮಿಯು ವಿದ್ಯಾವಂತ. ಆತ ಕ್ಷತ್ರಿಯ ರಮಣೀಯರ ವರ್ಣನೆಯನ್ನು ಕಾದಂಬರಿಯನ್ನು ಓದಿ ಅಲ್ಲಿನ ರಮಣೀಯರನ್ನು ತನ್ನ ಸುತ್ತಮುತ್ತಲ ಹೆಂಗಸರಿಗೆ ಹೋಲಿಸುತ್ತಾನೆ. ತನ್ನ ಹೆಂಡತಿ ಸೀತೆಗಿಂತ ತನ್ನ ಸ್ನೇಹಿತನ ಹೆಂಡತಿ ಇಂದಿರಾದೇವಿ ಕ್ಷತ್ರಿಯ ರಮಣೀಯರನ್ನು ಹೋಲುತ್ತಾಳೆ. ಎಂದು ಅವನು ಭಾವಿಸುತ್ತಾನೆ. ಇಲ್ಲಿ ಆರಂಭ ಆಗುವ ಅವನ ಅವಿವೇಕ ನಿಧಾನವಾಗಿ ಬೆಳೆದು ಆಕೆ ತನ್ನನ್ನು ಪ್ರೀತಿಸುತ್ತಾಳೆ ಎಂದು ಭಾವಿಸುವವರೆವಿಗೂ ಮುಂದುವರೆಯುತ್ತದೆ. ಈ ರೀತಿಯ ಅವಿವೇಕದಿಂದ ಇಂದಿರಾದೇವಿಯನ್ನು ಬಯಸಿ ತನ್ನ ತಪ್ಪಿನ ಅರಿವಾಗಿ ಪಶ್ಚಾತಾಪ ಪಡುತ್ತಾನೆ.

ರಂಗಸ್ವಾಮಿಯು ಸೀತೆಯೊಡನೆ ಮಾತನಾಡುವಾಗ ಮೊದಲು ಇಂದಿರಾದೇವಿಯ ಪ್ರಸ್ತಾಪ ಆಕಸ್ಮಿಕವಾಗಿ ಅಂದರೆ ಮುಂದೆ ಅವನೆ ಆಕೆಯ ಪ್ರಸ್ತಾಪ ಮಾಡುತ್ತಾನೆ೭. ಮುಂದೆ ಇಂದಿರೆಯು ಹೇಳಿದಳೆಂದು ಸಂಗೀತ ಕಲಿತುಕೊಳ್ಳುವುದು. ಕೂದಲನ್ನು ಉದ್ದವಾಗಿ ಬೆಳೆಸಿಕೊಳ್ಳುವುದು. ಮೊದಲಾದ "ಅವಿವೇಕ"ಗಳಲ್ಲಿ ಅವನ ಮೂಲ ಅವಿವೇಕಕ್ಕೆ ಸಂಬಂಧಿಸಿವೆ.೮ ಅಲ್ಲದೆ ತನ್ನನ್ನು ಇಂದಿರಾದೇವಿಯ ಗಂಡ ನರಸಿಂಹಮೂರ್ತಿಗೆ ಹೋಲಿಸಿಕೊಂಡು ಆತ ತನಗಿಂತ ಕೀಳು ಎಂಬ ಅವಿವೇಕದ ಆಲೋಚನೆಯನ್ನು ಆತ ಮಾಡುತ್ತಾನೆ.

ಹೀಗಾಗಿ ಈತನ ಅವಿವೇಕಕ್ಕೆ ಇವನೊಬ್ಬನೇ ಕಾರಣನಾಗುವುದಿಲ್ಲ. ಅವನ ಹೆಂಡತಿಯೂ ಕಾರಣಳಗುತ್ತಾಳೆ. ಎಂದರೆ ತಪ್ಪಾಗಲಾರದು. ಇವಳ ಕೀಳರಿಮೆ

---

ಅಡಿ ಟಿಪ್ಪಣಿ : ೬ ಶ್ರೀನಿವಾಸ :ಮಾವಿನಕೆರೆ ರಂಗನಾಥ್: ಪುಟ-೫೭
ಅಡಿ ಟಿಪ್ಪಣಿ : ೭: ಕೆಲವು ಸಣ್ಣ ಕತೆಗಳು (ಬೆಂಗಳೂರು.೧೯೨೦) ಪುಟ-೯೩
ಅಡಿ ಟಿಪ್ಪಣಿ : ೮ ಶ್ರೀನಿವಾಸ :ಮಾವಿನಕೆರೆ ರಂಗನಾಥ್: ಪುಟ- 114

ರಂಗಸ್ವಾಮಿಯ ಅವಿವೇಕಕ್ಕೆ ಅವಕಾಶ ಮಾಡಿಕೊಟ್ಟಿದೆ. ಅಲ್ಲದೆ ಹಿಂದೆ ಒಬ್ಬ ವ್ಯಕ್ತಿಯ ಅವಿವೇಕವಲ್ಲದೆ, ಒಂದು ದೃಷ್ಟಿಕೋನದ ಅವಿವೇಕ, ಸಾಹಿತ್ಯಕ್ಕೂ ಜೀವನಕ್ಕೂ ಇರುವ ಸಂಬಂಧವನ್ನು ಅರಿತುಕೊಳ್ಳಲು ಬೇಕಾದ ಪೂರ್ಣ ದೃಷ್ಟಿಯ ಕೊರತೆಯ ಕಾರಣವಾಗಿರುತ್ತದೆ.[೯]

ಇನ್ನು ಮುಂದೆ ಸಾಂಸಾರಿಕ ಬವಣೆಯನ್ನು ತಿಳಿಸುವ ಹಾಗೂ ಬಡತನದಿಂದಾಗಿ ಉಂಟಾಗುವ ದಾಂಪತ್ಯದ ಒಡಕನ್ನು ಕುರಿತ ಒಂದು ಕತೆ "ನಮ್ಮ ಮೇಷ್ಟರು" ಇಲ್ಲಿ ಹೆಣ್ಣಾಗಲೀ, ಗಂಡಾಗಲೀ, ತಪ್ಪಿ ನಡೆಯುವುದಿಲ್ಲ. ಆದರೆ ಬಡತನ ಅವರ ಬದುಕಿನಲ್ಲಿ ನೋವು ತರುತ್ತದೆ. ಈ ಬಡತನದ ಅನುಭವ ಹೆಣ್ಣು, ಗಂಡಿನಿಂದ ಬೇರ್ಪಟ್ಟಾಗ ಮತ್ತಷ್ಟು ತೀವ್ರವಾಗುತ್ತದೆ. ಈ ಕತೆಯಲ್ಲಿ ಮೇಷ್ಟರ ಹೆಂಡತಿ ಪ್ರಾಮುಖ್ಯತೆ ಪಡೆಯುತ್ತಿದ್ದಂತೆ ಕತೆ ಬೆಳೆಯುತ್ತಾ ಹೋಗುತ್ತದೆ. ಪ್ರಾರಂಭದಲ್ಲಿ ಆಕೆ ಗಯ್ಯಾಳಿಯಂತೆ ಕಾಣುತ್ತಾಳೆ. ಮೇಷ್ಟರೊಂದಿಗೆ ಜಗಳವಾಡುವುದು, ಇನ್ಸ್‌ಪೆಕ್ಟರ್‌ಗೆ ಮಾರುತ್ತರ ಕೊಡುವುದು, 'ಬಲಿತ ಹುಡುಗಿ' ಎನಿಸಿಕೊಳ್ಳುವುದು–ಇವುಗಳಿಂದ ಆಕೆಯ ಗುಣದಲ್ಲಿ ಕಾಠಿಣ್ಯ ಕಾಣಿಸಿದರೂ ಕತೆಯ ಕೊನೆಯಲ್ಲಿ ಆಕೆಯ ನೈಜ ವ್ಯಕ್ತಿತ್ವ ತೆರೆದುಕೊಳ್ಳುತ್ತದೆ.

ಮೇಷ್ಟರು ನಿರೂಪಕಿಗೆ ಹೇಳುವ "ಅವಳ ಪ್ರೀತಿ ಬಹಳ ಪ್ರೀತಿ ಸೀತಮ್ಮ, ನನ್ನ ಕಾಲನ್ನು ಹಿಡಿದುಕೊಂಡು 'ನಾನು ಹೋಗುತ್ತೇನೆ, ನನ್ನ ಮೇಲೆ ಏನೂ ಕೋಪವನ್ನೂ ಇಟ್ಟುಕೊಳ್ಳಬೇಡಿ. ನಿಮಗೆ ಕಷ್ಟವಾಗುವ ಹಾಗೆ ಮಾಡಿದೆ' ಎಂಬ ಮಾತುಗಳಿಂದ ಆಕೆಯ ಮನಸ್ಸಿನ ಮೃದುತ್ವ ಬಯಲಾಗುತ್ತದೆ. 'ನಿಮಗೆ ತಿಳಿಯದು ನಾನು ಸುಖವಾಗಿಯೇ ಇದ್ದೆ. ಅದು ಆಗ ನನಗೆ ತಿಳಿಯಲಿಲ್ಲ. ಈಗ ನಿಮ್ಮನ್ನ ಬಿಡುವ ಕಾಲ ಬಂತು ಈಗ ತಿಳಿಯಿತು, ಎಂದು ಮೆಷ್ಟರಿಗೆ ಆಕೆ ಹೇಳಿದಳೆನ್ನುವ ಮಾತುಗಳಲ್ಲಿ ಅಕೆ ಗಂಡನನ್ನು ಅರ್ಥಮಾಡಿಕೊಳ್ಳದೆ ಪಟ್ಟನೋವು, ಅವರ ಸಂಸಾರದ ರೂಪಕ್ಕೆ ಕಾರಣ ಎನ್ನುವುದು ತಿಳಿಯುತ್ತದೆ.

---

[illegible] ಶ್ರೀನಿವಾಸ :ಮಾವಿ[illegible]: ಪು. [illegible]

ಆದರೆ ಈ ರಂಪ ಉಂಟಾಗುವುದು ಬಡತನದಿಂದಲೇ. ಇಲ್ಲಿ ಮಾಸ್ತಿಯವರು ಸ್ತ್ರೀ ಪ್ರಾಧಾನ್ಯವನ್ನು ಹೆಚ್ಚಿಸಿ ಆ ಮೂಲಕ ಪುರುಷನ ಪರಿಚಯ ಮಾಡಿಸಿದ್ದಾರೆ. ಕಾರಣ ಸ್ತ್ರೀಯು ತುಳಿಯಲ್ಪಟ್ಟವಳೆಂಬ ಕಾರಣದಿಂದಲೋ ಏನೋ ಅವರ ಅಭಿಮಾನ ಅವರ ಕಡೆಗೆ ತೋರಿಸಿರುವುದನ್ನು ಈ ಕತೆಯಲ್ಲಿ ಕಾಣಬಹುದಾಗಿದೆ.

ಮತ್ತೊಂದು ಸಾಮಾಜಿಕ ಕತೆಗಳ ಸಾಲಿನಲ್ಲಿ ಒಂದಾದ "ಇಂದಿರೆಯೋ?ಅಲ್ಲವೋ"? ಕತೆಯ ಕೇಂದ್ರ ವ್ಯಕ್ತಿ ನಾರಾಯಣ ಮೂರ್ತಿಯು ಮೊದಲನೆಯ ಹೆಂಡತಿಯನ್ನು ಕಳೆದುಕೊಂಡ ಗಂಡ ಆಕೆಯನ್ನು ಅತಿ ಆತ್ಮೀಯವಾಗಿ ನೆನೆದುಕೊಳ್ಳುವ ಹೃದಯಂಗಮ ಚಿತ್ರಣ ಇಲ್ಲಿ ಕಾಣಬಹುದಾಗಿದೆ. ಕಥಾನಾಯಕ ತನ್ನ ಮೊದಲ ಹೆಂಡತಿಯ ಚಿಕ್ಕ ವಯಸ್ಸಿನ ಮಗುವನ್ನು ನೋಡಿಕೊಳ್ಳಲು ಎರಡನೆಯ ಮದುವೆಯಾಗುತ್ತಾನೆ. ಆದರೆ ಎರಡನೆಯ ಹೆಂಡತಿ ಸಾವಿತ್ರಿ ತನಗೆ ಮಕ್ಕಳಾದಾಗ ತನ್ನ ಮಲ ಮಗನನ್ನು ತಿರಸ್ಕರಿಸುತ್ತಾಳೆ. ಮೊದಲನೆಯ ಹೆಂಡತಿಯ ಮಗ ತೀರಿಕೊಳ್ಳುತ್ತಾನೆ. ಅಲ್ಲಿಗೆ ಈ ಕತೆ ಮುಕ್ತಾಯ ಆಗುತ್ತದೆ. ಈ ಒಂದು ಕತೆಯನ್ನು ಕಾಣುವ ಪ್ರಮುಖ ವಸ್ತು ಎಂದರೆ ಮರು ಮದುವೆಯ ಸಾಧಕ–ಬಾಧಕಗಳನ್ನು ಕಾಣಬಹುದಾಗಿದೆ.

'ಬೀದಿಯಲ್ಲಿ ಹೋಗುವ ನಾರಿ' ಯ ವೇಶ್ಯಾ ಬದುಕನ್ನು ಕುರಿತದ್ದು ವೇಶ್ಯೆಯನ್ನು ಇಟ್ಟುಕೊಂಡಿದ್ದ ತಂದೆಗೂ ಅವನ ಮಗನಿಗೂ ವ್ಯಕ್ತಿತ್ವದಲ್ಲಿ ಸಂಸ್ಕೃತಿಯಲ್ಲಿ ಎಷ್ಟು ಅಂತರವಿದೆ ಎಂಬುದನ್ನು ಸುಂದರವಾಗಿ ಚಿತ್ರಿಸುತ್ತದೆ. ಈ ಕತೆಯಲ್ಲಿ ಇದರ ಕೇಂದ್ರಪಾತ್ರವಾದ ಶ್ರೀನಿವಾಸಯ್ಯನಿಗೆ ಆಗುವ ಅನುಭವವನ್ನೂ, ಅವನನ್ನು ಸಮಾಜ ನೋಡಿವ ದೃಷ್ಟಿಯನ್ನು ಕುರಿತು ಹೇಳುತ್ತದೆ. ಶ್ರೀನಿವಾಸಯ್ಯ ಮುಗ್ಧ ವ್ಯಕ್ತಿ. ಈ ಮುಗ್ಧತೆಯಿಂದಾಗಿ ಅವನಿಗೆ ನಡೆಯುತ್ತಿರುವ ಅನ್ಯಾಯದ ಅರಿವಿಲ್ಲ. ಈ ಕತೆಯಲ್ಲಿ ಮಾಸ್ತಿಯವರು ಒಂದು ಸತ್ಯವನ್ನು ಪ್ರತಿಪಾದಿಸಿದ್ದಾರೆ.

ಜನ ದೇಹದ ದೌರ್ಬಲ್ಯದಿಂದ ವ್ಯಭಿಚಾರ ಮಾಡುತ್ತಾರೆ. ಅದರ ಫಲವಾಗಿ ಹುಟ್ಟಿದ ಮಕ್ಕಳನ್ನೂ ಸಹ ತನ್ನ ಮಕ್ಕಳೆಂದುಕೊಳ್ಳುವುದಿಲ್ಲ. ತಮ್ಮ ಪಾಪದ ಫಲವನ್ನು ಸಹ ಮತ್ತೆ ಪಾಪ ಮಾಡಲು ಬಿಡುತ್ತಾರೆ.

ಆದರೆ ಈ ಕತೆಯಲ್ಲಿ ಬರುವ ವಿವರಗಳಿಂದ ಓದುಗರಿಗೆ ಆಕೆ ವೇಶ್ಯೆ ಎಂದು ತೋರಿದರೂ ಶ್ರೀನಿವಾಸಯ್ಯನಿಗೆ ಅದು ತಿಳಿಯುವುದಿಲ್ಲ. ಈ ಮುಗ್ಧತೆಯಿಂದ ಅವನಲ್ಲಿ ಕಾಣುವ 'ಸಂನ್ಯಾಸತ್ವದ' ಬಗೆಗೆ ಸಮಾಜದ ಇತರರು ತಾತ್ಸಾರದಿಂದ ನೋಡುತ್ತಾರೆ. ಇವನ ಈ ಗುಣದಿಂದ "ಪೋಲಿಸರೂ ಟಚ್-ಟನ್ ನಿಲ್ಲುವುದನ್ನು ಬಿಟ್ಟು ಬಿಟ್ಟಿದ್ದರು ................ ಬೀದೀಲಿ ಹೋಗೋ ಹೆಂಗಸಿನ ಮುಖ ನೋಡುವುದಿಲ್ಲ. ಇವನು ಯಾವ ದೊಡ್ಡ ಮನುಷ್ಯ ಎಂಬುದು ಆ ಪೋಲೀಸರ ಭಾವನೆ.೧೦ ಸಾಮಾಜಿಕ ಡಂಭಾಚಾರವಿಲ್ಲದೆ ಸಹಜವಾಗಿ ನಡೆದುಕೊಳ್ಳುವ ವ್ಯಕ್ತಿಗೆ ಸಮಾಜ ತೋರಿಸುವ ಗೌರವ ಇವನ ಚಿತ್ರದಲ್ಲಿದೆ.

ಈ ಕತೆಯ ಕೊನೆಯ ಅರ್ಧ ಮೊದಲಿನ ಭಾಗಕ್ಕೆ ಸಂಪೂರ್ಣ ಭಿನ್ನವಾಗಿದೆ. ಶ್ರೀನಿವಾಸಯ್ಯ ನೋಡುವ ವೇಶ್ಯೆ ಅವನ ತಂದೆಗೆ ಸಂಬಂಧವಿದ್ದಳು ಪ್ರಾಯಶಃ ಅವನ ತಂದೆಯ ಮಗಳು ಎನ್ನುವ ಕೆಡ ಕತೆ ನಡೆಯುತ್ತದೆ. ಶ್ರೀನಿವಾಸಯ್ಯನಿಗೆ ಕತೆಯ ಕೊನೆಯ ಘಟ್ಟದವರೆವಿಗೂ ತಾನು ವೇಶ್ಯೆಯೊಂದಿಗೆ ಮಾತನಾಡಿದ್ದ ಎನ್ನುವುದು ಹೊಳೆಯುವುದೇ ಇಲ್ಲ.

ಆದರೆ "ಎಳೆಯ ಮನಸ್ಸಿನ" ಬಗೆಗೆ ಕತೆಗಾರರಿಗಿರುವ ಭಾವನೆ ಕತೆ ಹಾಸ್ಯ ಕತೆಯಾಗಿ ಬೆಳೆಯಲು ಬಿಡುವುದಿಲ್ಲ. ಕತೆಯಲ್ಲಿ ಸೃಷ್ಟಿಯಾದ ಸನ್ನಿವೇಶವೆಂದರೆ ರೈಲ್ವೆ ಸ್ಟೇಷನ್ನಿನಲ್ಲಿ ನಡೆಯುವ ಸನ್ನಿವೇಶವೊಂದೇ. ಆದರೆ ರೈಲ್ವೆ ಸ್ಟೇಷನ್ನಿನ ಸನ್ನಿವೇಶಕ್ಕೂ ಶ್ರೀನಿವಾಸಯ್ಯನಿಗೂ ಯಾವುದೇ ಸಂಬಂಧವೇರ್ಪಡದಂತೆ ಕತೆಯ

---

ಅಡಿ ಟಿಪ್ಪಣಿ : ೧೦ ಕೆಲವು ಸಣ್ಣ ಕಥೆಗಳು (ಬೆಂಗಳೂರು –೧೯೨೦): ಪುಟ–೧೨೭

ಸನ್ನಿವೇಶ ನಿರ್ಮಾಣವಾಗಿರುವುದೂ ಇದಕ್ಕೆ ಕಾರಣವಾಗಿರಬಹುದು. ಕತೆ ಕೊನೆಗೆ ತೀರಾ ಭಾವನಾವ ಕತೆಯಲ್ಲಿ ಮುಗಿದಿರುವುದರಿಂದ ವೇಶ್ಯೆಯ ತನ್ನ ಸಹೋದರಿಯೆಂಬಂಥ ಒಂದು ಮಟ್ಟದ ಭಾವನಾತ್ಮಕ ನೆಲೆಯಲ್ಲಿ ನಿಂತು ಬಿಡುತ್ತದೆ.

ಸಾಮಾನ್ಯವಾದ ಸಾಂಸಾರಿಕ ಚಿತ್ರವನ್ನು ಕಥೆಯೇ ಅಲ್ಲವೇನೋ ಎಂದು ಚಿತ್ರಿಸಿ ಸಂಕೀರ್ಣ ಬಾಳಿನೊಳಗಣ ಹೊಂದಾಣಿಕೆಯನ್ನು ವಿಶ್ವ ಸಾಧಾರಣವಾಗಿ ನಿರೂಪಿಸುವ ಒಂದು ವಿಶಿಷ್ಟ ಕಥೆ ಈ "ಮೊಸರಿನ ಮಂಗಮ್ಮ". ೧೧ ಈ ಕತೆಯಲ್ಲಿ "ವಿಶಿಷ್ಟ ಕೌಟುಂಬಿಕ ಹಾಗೂ ಸಾಮಾಜಿಕ ಸಂದರ್ಭದಲ್ಲಿ ವ್ಯಕ್ತಿಗೆ ಹುಟ್ಟುವ ಸಮಸ್ಯೆ ಕತೆಯ ವಸ್ತುವಾಗಿದೆ. ೧೨. ಈ ಕಥಾನಾಯಕಿ ಮಂಗಮ್ಮ ಹಳ್ಳಿಯ ಹಳೆಕಾಲದ ಹೆಂಗಸು. ಆದರೆ ಬಹಳ ಸುಸಂಸ್ಕೃತವಾದ ಮನಸ್ಸು. ಮಂಗಮ್ಮ ತನ್ನ ಕುಟುಂಬದಲ್ಲಿ ತನಗಿರಬೇಕಾದ ಪ್ರಭುತ್ವದಲ್ಲಿ ಸೊಸೆಯೂ ಪಾಲದಾರಳಾಗುವುದರಿಂದಾಗಿ ಹುಟ್ಟುವ ಜಗಳ ಹಾಗೂ ಆ ಜಗಳದಿಂದ ತಾಯಿ, ಮಗ–ಸೊಸೆಯರು ಬೇರಾಗುವುದು, ಸೊಸೆಯ ಚತುರ ಗುಣದಿಂದಾಗಿ ಮತ್ತೆ ತಾಯಿ, ಮಗ–ಸೊಸೆಯರು ಬೇರಾಗುವುದು. ಸೊಸೆಯ ಚತುರ ಗುಣದಿಂದಾಗಿ ಮತ್ತೆ ತಾಯಿ, ಮಗ–ಸೊಸೆಯರು ಒಂದುಗೂಡುವುದು. ಈ ಘಟನೆಗಳ ಕತೆಯನ್ನು ನಿರ್ಮಿಸಿವೆ. ತನ್ನ ಮನೆಯವರಿಂದ ಬೇರಾದ ಮಂಗಮ್ಮ ಬೇರಾದ ಕಾರಣದಿಂದಲೇ ಉಂಟಾಗುವ ಹಲವು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ.

ತಾನು ಕುಟುಂಬದಿಂದ ದೂರವಾದುದರಿಂದ ಉಂಟಾಗುವ ಅನರ್ಥ ಮನಗಂಡು ಮಂಗಮ್ಮ ಮತ್ತೆ ಕುಟುಂಬದೊಂದಿಗೆ ರಾಜಿ ಮಡಿಕೊಳ್ಳುತ್ತಾಳೆ. ಅತ್ತೆ ತನ್ನಿಂದ ಬೇರಾದುದರಿಂದ ಆಗುವ ನಷ್ಟವನ್ನು ಸೊಸೆಯೂ ಮನಗಂಡು ಅತ್ತೆಯೊಂದಿಗೆ ರಾಜಿ ಮಾಡಿಕೊಳ್ಳುತ್ತಾಳೆ. ಕತೆಯ ಸಂಗತಿ ನವುರಾದುದರಿಂದ, ಹೆಣ್ಣು ಪಾತ್ರಗಳು ಕತೆಯ ಕೇಂದ್ರ ಸ್ಥಾನದಲ್ಲಿರುವುದರಿಂದ ಈ ಕತೆ ನಿರೂಪಕಿಯೊಬ್ಬಳಿಂದ ಹೇಳಿಸಲಾಗಿದೆ ಎನಿಸುತ್ತದೆ. ಮಾಸ್ತಿಯವರ ಇತರ ಯಾವುದೇ ಕತೆಗಿಂತ ವಿಶಿಷ್ಟವಾದ ಕುಸುರಿಯನ್ನು ಈ ಕತೆಯಲ್ಲಿ ಕಾಣಬಹುಹು.

---

ಅಡಿ ಟಿಪ್ಪಣಿ : ೧೧ ಶ್ರೀನಿವಾಸ: ಮಾವಿನಕೆರೆ ರಂಘನಾಥ್ : ಪುಟ–೭೬
ಅಡಿ ಟಿಪ್ಪಣಿ : ೧೨ ನಾಯಕ ಜಿ.ಹೆಚ್. ಕನ್ನಡ ಸಣ್ಣಕಥೆ ಒಲವೂ ನಿಲುವುಗಳು 'ಅನಿವಾರ್' ಪುಟ–೪೮

ಒಂದು ಘಟನೆಯಿಂದ ಮತ್ತೊಂದು ಘಟನೆಗೆ ನವುರಾದ ಸಂಪರ್ಕವನ್ನೇರ್ಪಡಿಸಿಕೊಂಡು ಕತೆ ಬೆಳೆದಿದೆ. ಮಂಗಮ್ಮಳ ಕತೆಯಿಂದ ಮಾತ್ರವಲ್ಲದೆ ಕತೆಯಲ್ಲಿ ಸಂಗತಿಯನ್ನು ಅವಳ ಸೊಸೆಯ ಕಡೆಯಿಂದಲೂ ನೋಡಲಾಗಿದೆ.

ಕತೆಯ ಮೊದಲ ವಿವರಗಳಲ್ಲಿ ಮಂಗಮ್ಮಳ ಕುಟುಂಬದಲ್ಲಿ ಹುಟ್ಟುವ ಸಮಸ್ಯೆ ಸೂಚಿತವಾಗುತ್ತದೆ. ತನ್ನನ್ನು ಅನುಸರಿಸಿ ನಡೆಯುತ್ತಿದ್ದ ಮಗ, ಅವನ ಹೆಂಡತಿ ಬಂದಾಗ ಅವಳನ್ನು ಅನುಸರಿಸುವುದನ್ನು ಕುರಿತು ಮಂಗಮ್ಮಳಿಗೆ ನೋವು ಉಂಟಾಗಿದೆ. '............... ಇದೆಲ್ಲ ಏನವ್ವ? ಹುಡುಗ ಬೆಳೆಯೋ ತಂಕನೆ, ಬೆಳೆದ ಮೇಲೆ ಯಾವಳೋ ಬರ್‍ತಾಳೆ. ಈಗ ಅಮ್ಮ ಅಮ್ಮ ಅಂತ ಇರೋ ಮಗ ಆಗ ಅಮ್ಮನ್ನ ನೀನು ಇದಿಯಾ, ಸತ್ಯಾ ಅಂತ ಕೇಳೋಲ್ಲ" ೧೩ ಈ ಮಾತು ಮಂಗಮ್ಮಳಿಗೂ ಅವಳ ಕುಟುಂಬಕ್ಕೂ ಹುಟ್ಟುವ ಕಲಹದ ಸೂಚನೆಯಾಗಿದೆ. ಈ ಭಾಗದಲ್ಲಿ ಮಂಗಮ್ಮಳ ಕಳೆದುಹೋದ ದಾಂಪತ್ಯದ ಚಿತ್ರಕ್ಕೆ ಸೂಚ್ಯವಾಗಿ ಬರುತ್ತದೆ. ತಾನು ತನ್ನ ದಾಂಪತ್ಯ ಜೀವನದಲ್ಲಿ ಏನು ಮಾಡುವುದರಲ್ಲಿ ಸೋತು ತನ್ನ ಗಂಡ ಬೇರೆಯವಳಲ್ಲಿಗೆ ಹೋಗಲು ಕಾ'ರಣವಾಯಿತೋ ಈ ಅನುಭವ ಮೂಲಕ ಗಂಡನೊಂದಿಗೆ ನಡೆದುಕೊಳ್ಳಬೇಕಾದ ನಡವಳಿಕೆಯ ಬಗೆಗೆ ನಿರೂಪಕಿಗೆ ಬುದ್ದಿವಾದ ಹೇಳುತ್ತಾಳೆ. ೧೪

ಈ ಕತೆಯ ಮುಂದಿನ ಭಾಗದಲ್ಲಿ ಮಂಗಮ್ಮಳ ಸಮಸ್ಯೆ ಬೆಳೆಯುತ್ತದೆ. ಮೊಮ್ಮಗನನ್ನು ದಂಡಿಸುವ ಸೊಸೆಯೊಂದಿಗೆ ಮಗುವನ್ನು ದಂಡಿಸಿದುದಕ್ಕಾಗಿ ಜಗಳವಾಡುತ್ತಾಳೆ. ಮಗನಿಗೆ ಈ ವಿಷಯದಲ್ಲಿ ಸೊಸೆಯ ಮೇಲೆ ದೂರಿತ್ತರೂ ಮಗ ಮಾತನಾಡದೇ ಇರುವುದರಿಂದ ಮಂಗಮ್ಮ ಕೋಪದಲ್ಲಿ ಬೇರೆ ಇರುವ ತೀರ್ಮಾನ ತೆಗೆದುಕೊಳ್ಳುತ್ತಾಳೆ. ಇಲ್ಲಿ ಮಂಗಮ್ಮಳಿಗೆ ಕುಟುಂಬದಲ್ಲಿ ಇರುವ ತನ್ನ ಹಿಡಿತದಲ್ಲಿ ಸೊಸೆಯೂ ಪಾಲುದಾರಳಾಗುತ್ತಿರುವುದರ ಬಗೆಗೆ ಕೋಪವಿದೆ. ಮೊಮ್ಮಗನನ್ನು ತನ್ನಿಂದ ಸೊಸೆ ದೂರ ಮಾಡುತ್ತಿರುವುದರ ಬಗೆಗೆ ನೋವಿದೆ. ಮಗನಿಗೆ ವಯಸ್ಸಾದರೂ ಅವನ ಮೇಲೆ ತನ್ನ ಹಿಡಿತವಿರಬೇಕೆಂದು ಬಯಸುವ

---

ಅಡಿ ಟಿಪ್ಪಣಿ : ೧೩ ಸಣ್ಣಕಥೆ- ಶಿ.ಟಿ., : ಪುಟ-೦೨
ಟಿಪ್ಪಣಿ : ೧೪ ಸಣ್ಣಕಥೆ- ಶಿ.ಟಿ., : ಪುಟ-೦೩

ಮಂಗಮ್ಮ ಸೊಸೆಗೆ ಅವಳ ಮಗನ ಮೇಲೆ ಇರುವ ಹಿಡಿತವನ್ನು ತಡೆಯುತ್ತಾಳೆ. ಎನ್ನುವುದರಲ್ಲಿ ಕತೆಯಲ್ಲಿ ವ್ಯಂಗ್ಯದ ಸೂಚನೆಯಿದೆ.

ಹೀಗೆ ಮುಂದುವರೆದು ಮನೆಯಿಂದ ಹೊರಬಂದ ಮಂಗಮ್ಮಳಿಗೆ ಉಂಟಾಗುವ ಉದ್ವೇಗ ಹಾಗೂ ಬುದ್ದಿವಿಕಲ್ಪ ಕಾಣಬರುತ್ತದೆ. ಮಗನಿಂದ ಬೇರಾದುದುರಿಂದ ಯಾರಿಗಾಗಿ ಹಣ ಬಳಸಬೇಕು ಎನ್ನುವ ಭಾವನೆಯ ತೀವ್ರತೆಯಲ್ಲಿ ಮಕಮಲ್ಲು ಹೊಲಿಸಿದುಂದು ಮಾಡುತ್ತಾಳೆ. ಈ ಚಿತ್ರ ಅವಳ ಉದ್ವೇಗದ ಸೂಚನೆಯ ಜೊತೆಗೆ ತನ್ನ ಗಂಡ ಇದ್ದಾಗ ' ಅವನ ಕಣ್ಣಿಗೆ ಚಂದಾಗಿರೋ' ರವಿಕೆ ಶಾಲೆ ಉಡದೆ ೧೫ ಈಗ ತೊಡುವುದರಲ್ಲಿ ಇರುವ ಆಕೆಯ ಅಸಂಬದ್ದ ಮನಸ್ಥಿತಿಯನ್ನು ಸೂಚಿಸುತ್ತದೆ.

ನಂತರ ಸಮಾಜದಲ್ಲಿ ಆಕೆಯನ್ನು ನಡೆಸುವ ರೀತಿಯು ಆಕೆಯನ್ನು ಮತ್ತಷ್ಟು ಜೀವನದಲ್ಲಿ ಸಂದಿಗ್ದತೆಯತ್ತ ಕೊಂಡೊಯ್ಯುತ್ತದೆ. ಅಂದರೆ ಆಕೆ ತಾನು 'ಜಾಕೀಟು' ಹಾಕಿ ಕೊಂಡಾಗ ಜನ ಆಡಿಕೊಂಡದ್ದು ತನ್ನ ಒಂಟಿ ಜೀವನದಲ್ಲಿ ವ್ಯಾಪಾರ ವೃತ್ತಿಯಿಂದ ಸಂಪಾದಿಸಿದ್ದ ಹಣದ ಜವಾಬ್ದಾರಿಯ ಸಮಸ್ಯೆ ಹುಟ್ಟುತ್ತದೆ. ರಂಗಪ್ಪ ಎಂಬಾತ ಮಂಗಮ್ಮಳನ್ನು ಸಾಲದ ರೂಪದಲ್ಲಿ ಹಣ ಕೇಳಿದಾಗ ಸಮಸ್ಯೆಯ ತೀವ್ರತೆ ಕಾಣಿಸುತ್ತದೆ. ಈ ದಿನ ಹಣ ಕೇಳಿದ ಆತ ಮುಂದೊಂದು ದಿನ 'ಮಾನಕೇಳುವುದು" ಮತ್ತೊಂದು ಸಮಸ್ಯೆಗೆ ಕಾರಣವಾಗುತ್ತದೆ. ಇಷ್ಟೆಲ್ಲ ಇಕ್ಕಟ್ಟಿನ ಸ್ಥಿತಿ ಬಂದರು ಸ್ವಾಭಿಮಾನದ ಹಿನ್ನೆಲೆಯಲ್ಲಿ ತನ್ನ ಮನೆಗೆ [ಮಗನ] ಹಿಂದಿರುಗಲು ಸಿದ್ದಳ್ಳಾಗುವುದಿಲ್ಲ. ಆದರೆ ಮುಂದಿನ ದಿನಗಳಲ್ಲಿ ಮೊಮ್ಮಗ ತನ್ನೊಂದಿಗೆ ಬರುವುದು ಈಕೆಗೆ ಸ್ವಲ್ಪ ಸಮಾಧಾನ ತಂದುಕೊಡುತ್ತದೆ. ಆದರೂ ರಂಗಪ್ಪನ ಪ್ರಸಂಗದಿಂದ ತಾನು ಮನನೊಂದು ಒಂಟಿ ಜೀವನದಿಂದ ದೂರವಿರಲು ಮನಸು ಮಾಡುತ್ತಾಳೆ.

ಕೊನೆಗೆ ಬೇರೆಯಾದುದರಿಂದ ಸೊಸೆ ಮತ್ತು ಮಗನೊಡನೆ ತನ್ನ ಸಂಬಂಧ ಎಂತಹುದು ಎಂಬ ಅರಿವು ಮಂಗಮ್ಮಗಳಿಗಾಗಿದೆ. ಸೊಸೆಯ ಮೇಲೆ

---

[illegible] ಟಿಪ್ಪಣಿ : [illegible] ಸಣ್ಣಕಥೆ- ಶಿ.ಕೆ., : [illegible]

ತನ್ನ ಅಧಿಕಾರವಿರಬೇಕು ಎಂಬುದು ಹೋಗಿ ಸೊಸೆಯನ್ನು ಅರ್ಥಮಾಡಿಕೊಳ್ಳುವ ಮಟ್ಟಕ್ಕೆ ಬರುತ್ತಾಳೆ. ಮುಂದೆ ಸೊಸೆಯೇ ಬಂದು ತಮ್ಮೊಂದಿಗಿರುವಂತೆ ಕೇಳಿದಾಗಃ ತನ್ನ ದೊಡ್ಡಸ್ಥಿಕೆ ನಿಂತಂತೆ ಆಗಿ ಮಗ ಸೊಸೆಯರೊಂದಿಗೆ ಮತ್ತೆ ಸೇರುತ್ತಾಳೆ. ಹೀಗಾಗಿ ಅಂತಿಮ ಹಂತದಲ್ಲಿ ಮಂಗಮ್ಮಳ ಸೊಸೆಯ ಕಡೆಯಿಂದ ಸಮಸ್ಯೆಯ ರೂಪ ತಿಳಿಯುತ್ತದೆ. ಅತ್ತೆ ತನ್ನ ಅಧಿಕಾರ ತನಗೆ ಬಿಡದಿದ್ದುದು ಅವಳೊಡನೆ ಜಗಳವಾಡಲು ಕಾರಣವಾದರೂ ಅತ್ತೆಯ ಆಸ್ತಿ ಬೇರೆಯವರ ಪಾಲಾಗದಂತೆ ನೋಡಿಕೊಳ್ಳಬೇಕಾದಷ್ಟು ಆಕೆಯ ಜವಾಬ್ದಾರಿ ಆಗಿದೆ. ಮುಂದೆ ಮಂಗಮ್ಮಳ ಕಡೆಯಿಂದ ದುರಂತವಾಗಿ ಮುಗಿಯಬೇಕಾದಷ್ಟು ಕತೆ ಸುಖಾಂತವಾಗಿ ಮುಗಿಯುತ್ತದೆ.

ಮಾಸ್ತಿಯವರ ಕಥೆಯ ಅಧ್ಯಯನದ ಸಂದರ್ಭದಲ್ಲಿ ಪ್ರಮುಖವಾಗಿ ಕಾಣುವ ಮತ್ತೊಂದು ವಸ್ತುವೆಂದರೆ ದಾಂಪತ್ಯ ನೋವು ನಲಿವುಗಳು. ಅಂತಹ ದಾಂಪತ್ಯದ ಕತೆಗೆ ಉತ್ತಮ ನಿದರ್ಶನ ಎಂದರೆ "<u>ನಳಿನಿಯ ತಂದೆ</u>" ಯು ಒಂದು ಸಾಮಾಜಿಕ ಕತೆಯಾಗಿದೆ. ನಾ ಕಂಡಂತೆ ಅಲ್ಲಿ ಕಂಡು ಬರುವ ಒಂದು ಪ್ರಮುಖ ಅಂಶ ಎಂದರೆ ಆದರ್ಶ ರೂಪಿಣಿಯಾದ ಲಕ್ಷ್ಮಿಯು ತನ್ನ ಗಂಡನಾದ ವಿಶ್ವನಾಥನಿಂದ ಜೀವನದಲ್ಲಿ ಮೋಸಹೋಗಿ ತನ್ನ ಉಜ್ವಲಬಾಳನ್ನು ಸಪ್ಪೆಯಾಗಿಸಿಕೊಂಡದ್ದು. ಅಂದರೆ ಈ ಕತೆಯ ನಾಯಕಿ ಲಕ್ಷ್ಮಿಯೂ ಕೇಡಿಗನಾದ ಗಂಡನ ಜೊತೆಯಲ್ಲಿ ಹೆಣಗಬೇಕಾಗಿ ಬಂತು. ಲಕ್ಷ್ಮಿ ತಕ್ಕ ಮಟ್ಟಿಗೆ ಓದಿದವಳು ಸ್ವಭಾವ ಬಲದಿಂದ ಮಾತ್ರವಲ್ಲದೆ ವಿಚಾರ ಶಕ್ತಿಯಿಂದಲೂ ತನ್ನ ಸಮಸ್ಯೆಯನ್ನು ಪರಿಶೀಲಿಸಿ, ತನ್ನ ಜೀವನ ರಥ ಹೇಗೆ ಸಾಗಬೇಕು ಎಂದು ಮನಸ್ಸಿನಲ್ಲಿಯೇ ನಕ್ಷೆ ಬರೆದುಕೊಂಡು ಅದರಂತೆ ಅದನ್ನು ನಡೆಸಿದಳು. ಅವಳು ತನ್ನ ಗಂಡನ ಸೊಳೆಗಾರಿಕೆಯನ್ನು ಸಹಿಸಿದಳು. ತನ್ನ ಆಸ್ತಿಯನ್ನು ಅವನು ಪೋಲು ಮಾಡುತ್ತಿದ್ದದ್ದನ್ನು ಸ್ವಲ್ಪ ಕಾಲ ಸಹಿಸಿದಳು. ಅನಂತರ "ಅವಳ ಮನಸ್ಸು ಕಲ್ಲಾಯಿತು, ಉಕ್ಕಾಯಿತು." ಕೊನೆಯಲ್ಲಿ ಇನ್ನು ನೀವು ಈ ಮನೆಯಲ್ಲಿರಕೂಡದು ಎಂದು ಅವನನ್ನು ಹೊರಡಿಸಿದಳು. ಅವನನ್ನು ನಿಷ್ಠೂರವಾಗಿ ಹೊರದೂಡಿದ

ತನ್ನ ಅಧಿಕಾರವಿರಬೇಕು ಎಂಬುದು ಹೋಗಿ ಸೊಸೆಯನ್ನು ಅರ್ಥಮಾಡಿಕೊಳ್ಳುವ ಮಟ್ಟಕ್ಕೆ ಬರುತ್ತಾಳೆ. ಮುಂದೆ ಸೊಸೆಯೇ ಬಂದು ತಮ್ಮೊಂದಿಗಿರುವಂತೆ ಕೇಳಿದಾಗಲೀ ತನ್ನ ದೊಡ್ಡಸ್ಥಿಕೆ ನಿಂತಂತೆ ಆಗಿ ಮಗ ಸೊಸೆಯರೊಂದಿಗೆ ಮತ್ತೆ ಸೇರುತ್ತಾಳೆ. ಹೀಗಾಗಿ ಅಂತಿಮ ಹಂತದಲ್ಲಿ ಮಂಗಮ್ಮಳ ಸೊಸೆಯ ಕಡೆಯಿಂದ ಸಮಸ್ಯೆಯ ರೂಪ ತಿಳಿಯುತ್ತದೆ. ಅತ್ತೆ ತನ್ನ ಅಧಿಕಾರ ತನಗೆ ಬಿಡದಿದ್ದುದು ಅವಳೊಡನೆ ಜಗಳವಾಡಲು ಕಾರಣವಾದರೂ ಅತ್ತೆಯ ಆಸ್ತಿ ಬೇರೆಯವರ ಪಾಲಾಗದಂತೆ ನೋಡಿಕೊಳ್ಳಬೇಕಾದಷ್ಟು ಆಕೆಯ ಜವಾಬ್ದಾರಿ ಆಗಿದೆ. ಮುಂದೆ ಮಂಗಮ್ಮಳ ಕಡೆಯಿಂದ ದುರಂತವಾಗಿ ಮುಗಿಯಬೇಕಾದಷ್ಟು ಕತೆ ಸುಖಾಂತವಾಗಿ ಮುಗಿಯುತ್ತದೆ.

ಮಾಸ್ತಿಯವರ ಕಥೆಯ ಅಧ್ಯಯನದ ಸಂದರ್ಭದಲ್ಲಿ ಪ್ರಮುಖವಾಗಿ ಕಾಣುವ ಮತ್ತೊಂದು ವಸ್ತುವೆಂದರೆ ದಾಂಪತ್ಯ ನೋವು ನಲಿವುಗಳು. ಅಂತಹ ದಾಂಪತ್ಯದ ಕತೆಗೆ ಉತ್ತಮ ನಿದರ್ಶನ ಎಂದರೆ "ನಳಿನಿಯ ತಂದೆ" ಯು ಒಂದು ಸಾಮಾಜಿಕ ಕತೆಯಾಗಿದೆ. ನಾ ಕಂಡಂತೆ' ಅಲ್ಲಿ ಕಂಡು ಬರುವ ಒಂದು ಪ್ರಮುಖ ಅಂಶ ಎಂದರೆ ಆದರ್ಶ ರೂಪಿಣಿಯಾದ ಲಕ್ಷ್ಮಿಯು ತನ್ನ ಗಂಡನಾದ ವಿಶ್ವನಾಥನಿಂದ ಜೀವನದಲ್ಲಿ ಮೋಸಹೋಗಿ ತನ್ನ ಉಜ್ವಲಬಾಳನ್ನು ಸಪ್ಪೆಯಾಗಿಸಿಕೊಂಡದ್ದು. ಅಂದರೆ ಈ ಕತೆಯ ನಾಯಕಿ ಲಕ್ಷ್ಮಿಯೂ ಕೇಡಿಗನಾದ ಗಂಡನ ಜೊತೆಯಲ್ಲಿ ಹೆಣಗಬೇಕಾಗಿ ಬಂತು. ಲಕ್ಷ್ಮಿ ತಕ್ಕ ಮಟ್ಟಿಗೆ ಓದಿದವಳು ಸ್ವಭಾವ ಬಲದಿಂದ ಮಾತ್ರವಲ್ಲದೆ ವಿಚಾರ ಶಕ್ತಿಯಿಂದಲೂ ತನ್ನ ಸಮಸ್ಯೆಯನ್ನು ಪರಿಶೀಲಿಸಿ, ತನ್ನ ಜೀವನ ರಥ ಹೇಗೆ ಸಾಗಬೇಕು ಎಂದು ಮನಸ್ಸಿನಲ್ಲಿಯೇ ನಕ್ಷೆ ಬರೆದುಕೊಂಡು ಅದರಂತೆ ಅದನ್ನು ನಡೆಸಿದಳು. ಅವಳು ತನ್ನ ಗಂಡನ ಸೂಳೆಗಾರಿಕೆಯನ್ನು ಸಹಿಸಿದಳು. ತನ್ನ ಆಸ್ತಿಯನ್ನು ಅವನು ಪೋಲು ಮಾಡುತ್ತಿದ್ದದ್ದನ್ನು ಸ್ವಲ್ಪ ಕಾಲ ಸಹಿಸಿದಳು. ಅನಂತರ "ಅವಳ ಮನಸ್ಸು ಕಲ್ಲಾಯಿತು, ಉಕ್ಕಾಯಿತು." ಕೊನೆಯಲ್ಲಿ ಇನ್ನು ನೀವು ಈ ಮನೆಯಲ್ಲಿರಕೂಡದು ಎಂದು ಅವನನ್ನು ಹೊರಡಿಸಿದಳು. ಅವನನ್ನು ನಿಷ್ಠೂರವಾಗಿ ಹೊರದೂಡಿದ

ಮೇಲೂ ಲಕ್ಷ್ಮಿ ಅವನಿಗೆ ಅನ್ನವಿಲ್ಲದಂತೆ ಮಾಡಲಿಲ್ಲ. ಗೆರೆಕುಯ್ದು ಹಾಗೆ ಲೆಕ್ಕಾಚಾರ ಹಾಕಿ ತನ್ನ ಸಂಪಾದನೆಯಲ್ಲಿ ಮೂರನೇ ಬಾಳ್ವೆ ಸಾಧ್ಯವಿಲ್ಲ. ಎಂಬ ನಿಲುವು ಮಾತ್ರ ಕೊನೆಯವರೆಗೂ ಬದಲಾಗಲಿಲ್ಲ.

ಈ ಕಥೆಯನ್ನು ಸಂಪೂರ್ಣವಾಗಿ ಓದಿದಾಗ ಈ ಗಂಡಹೆಂಡತಿಯರಿಬ್ಬರ ವಿಷಯದಲ್ಲೂ ಕನಿಕರ ಹುಟ್ಟುತ್ತದೆ. ಜನ ಇದೇಕೆ ಹೀಗೆ ಮಾಡಿಕೊಳ್ಳುತ್ತಾರೆ. ವಿಶ್ವನಾಥ ಏನೋ ಮಾಡದೆ ಸುಮ್ಮನಿದ್ದರೂ ಸಾಕಾಗಿತ್ತು. ಬದುಕಿನಲ್ಲಿ ಅವನಿಗೂ ಲಕ್ಷ್ಮಿಗೂ ಅನಾಯಾಸವಾಗಿ ಸುಖ ಸೂರೆಯುತ್ತಿತ್ತು. ಈ ಕೆಥೆಗೆ ಕೊಟ್ಟಿರುವ ಮುಕ್ತಾಯ ಪಾತ್ರಗಳ ಸ್ವಭಾವವಕ್ಕೂ ಸಂದರ್ಭದಕ್ಕೂ ಕಲೆಯಲ್ಲಿರಬೇಕಾದ ತರ್ಕಕ್ಕೂ ಅನುಗುಣವಾಗಿದೆ.೧೬

ಮುಂದೆ ಸಮಾಜದಲ್ಲಿ ಹೆಣ್ಣು ನೀತಿಯನ್ನು ಮೀರಿದ್ದರಿಂದ ಸಂಸಾರದಲ್ಲಿ ದಾಂಪತ್ಯಕ್ಕೆ ಒಡಕು ಉಂಟಾಗುವುದನ್ನು ಕುರಿತಾಗಿ ತಿಳಿಸುವ ಕಥೆ ಈ "ವೆಂಕಟಿಗನ ಹೆಂಡತಿ". ಈ ಕತೆಯ ವೆಂಕಟಿಗ ಕೆಳವರ್ಗದಿಂದ ಬಂದಂತಹ ವ್ಯಕ್ತಿ. ಈತ ಸೌದೆ ಮಾರಿ ಜೀವನ ಸಂಪಾದಿಸುವ ತರುಣ. ಈತ ತನ್ನ ಸಂಬಂಧಿಕರಲ್ಲಿಯೇ ಒಬ್ಬಳಾದ ಹೆಣ್ಣನ್ನು ಮದುವೆಯಾಗುತ್ತಾನೆ. ಹೆಂಡತಿ ಸಾಹುಕಾರನೊಬ್ಬನಿಗೆ ಮರುಳಾಗಿ ಅವನ ಬಳಿಗೆ ಹೊರಟು ಹೋಗಿದ್ದಾಳೆ. ಮುಂದೊಂದು ದಿನ ವೆಂಕಟಿಗ ಸಾಹುಕಾರನನ್ನು ತನ್ನ ಹೆಂಡತಿಯನ್ನು ಹಿಂದಕ್ಕೆ ಕಳುಹಿಸುವಂತೆ ಕೇಳುತ್ತಾನೆ. ಆದರೆ ಸಾಹುಕಾರ ಒಪ್ಪಲಿಲ್ಲ; ವೆಂಕಟಿಗನ ಹೆಂಡತಿಯೂ ವಾಪಸ್ಸು ಬರಲು ಮನಸ್ಸು ಮಾಡುವುದಿಲ್ಲ. ಮುಂದೆ ವೆಂಕಟಿಗ ಆಕೆಗೆ 'ನೀನು ಎಂದು ಬೇಕಾದರೂ ನನ್ನಲಿಗೆ ಬರಬಹುದು ನಿನಗಾಗಿ ಕಾಯುತ್ತಿರುತ್ತೇನೆ' ಅಂದು ಹೇಳಿ ಆ ಊರು ಬಿಟ್ಟು ಬೆಂಗಳೂರಿಗೆ ಬರುತ್ತಾನೆ.

ನಂತರ ಸಾಹುಕಾರ 'ಹಣಕೊಡುತ್ತೇನೆ ಬೇರೆಯವರನ್ನು ಮದುವೆಯಾಗು' ಎನ್ನುತ್ತಾನೆ. ಈ ರೀತಿಯ ಸಾಹುಕಾರನ ದುಷ್ಟಗುಣದ ಪರಿಚಯವಾದಂತೆ ವೆಂಕಟಿಗನ ಹೆಂಡತಿ ಅವನನ್ನ ತ್ಯಜಿಸಿ ಗಂಡನಲ್ಲಿಗೆ ಬರುತ್ತಾಳೆ. ಆ ವೇಳೆಗೆ ಅವಳಿಗೊಂದು ಮಗುವೂ ಆಗಿರುತ್ತದೆ. ಆದರೂ ಸಹ ವೆಂಕಟಿಗ ಆಕೆಯನ್ನು ಒಪ್ಪಿ ಹಿಂದಕ್ಕೆ ಕರೆದುಕೊಳ್ಳುತ್ತಾನೆ. ತನ್ನದಲ್ಲದ ಮಗುವನ್ನು ಹೆಂಡತಿ ನಿಮ್ಮಂತೆ

---

ಅಡಿ ಟಿಪ್ಪಣಿ : ೧೬ ಶ್ರೀ ಮಾಸ್ತಿಯವರ ಕಥೆಗಳು :ಎ.ಎನ್.ಮೂರ್ತಿ ರಾವ್. ಕಾವ್ಯಾಲಯ ಪ್ರಕಾಶನ. : ಪುಟ-೨೬-೨೮

ಇದೆ ಎಂದಾಗ ಸಾಮಾಧಾನಕ್ಕಾಗಿ ಒಪ್ಪಿಕೊಳ್ಳುತ್ತಾನೆ. ಇಲ್ಲಿ ವೆಂಕಟಿಗನ ಹೆಂಡತಿ ನೀತಿ ತಪ್ಪಿದರೂ ಆ ಸಂದರ್ಭದಲ್ಲಿ ಅವನ ಸಂಯಮ ಮತ್ತು ವಿಶಾಲ ಮನಸ್ಸು ಮುಖ್ಯವಾಗುತ್ತದೆ. ಬಹುಶಃ ಆತನ ಈ ಸಂಯಮಕ್ಕೆ ಅತ ಹುಟ್ಟಿ ಬೆಳದ ವಾತವಾರಣ ಕಾರಣ ವಿರಬಹುದು. ಹೆಂಡತಿ ತನ್ನ ಹಿಂದೆ ಬರಲು ಒಪ್ಪದಿದ್ದಾಗ "ಎಷ್ಟೋ ಸಲ ಆ ಹಂತದ ಮೇಲೆ ಜೊತೆಯಾಗಿ ನಡೆದ ನಾವು ಹೀಗೆ ಬೇರೆಯಾಗಿ ಬಾಳುವುದು ಸರಿಯಾಗಲಾರದು. ತಿರುಗಿ ನಿನಗೆ ಯಾವ ಸಂದರ್ಭದಲ್ಲಿ ಆದರೂ ನನ್ನ ಬಳಿ ಬರಬೇಕು ಅನಿಸಿದರೆ ಸಂಕೋಚ' ಪಡದೆ ಹೊರಟು ಬಂದು ಬಿಡು. ನಾನು ಅದುವರೆಗೆ ಕಾದಿರುತ್ತೇನೆ" ೧೭ ಎನ್ನುತ್ತಾನೆ. ಅದಕ್ಕೆ ಕಾರಣ ಎಂದರೆ ಆತ ಹೆಣ್ಣು-ಗಂಡಿನ ಸಂಬಂಧ ಜನ್ಮ ಜನ್ಮಾತರದ್ದು ಎಂದು ನಂಬಿದ್ದು. ಆತ ತನ್ನಲ್ಲಿಯೆ ಇಂದಿಲ್ಲದಿದ್ದರೆ ಇನ್ನೊಂದು ದಿನ ಈ ಜನ್ಮಕಲ್ಲದಿದ್ದರೆ ಇನ್ನೊಂದು ಜನ್ಮಕ್ಕಾದರೂ ನಾನು ಅವಳಿಗೆ ದಿಕ್ಕಾಗಿರಬೇಕು. ಎಂದೇ ನನ್ನ ತಿಳುವಳಿಕೆ ೧೮ ಎಂಬಂತಹ ಅವನ ಮಾತುಗಳು ಆತನ ನಂಬುಗೆಯನ್ನು ಹೇಳುತ್ತವೆ. ಹೀಗಾಗಿ ವೆಂಕಟಿಗನ ಹೆಂಡತಿಯ ಬಗೆಗೆ ಕತೆಯಲ್ಲಿ ಬರುವ ವಿವರಗಳೆಲ್ಲ ನೇರವಾಗಿಬರದೆ, ವೆಂಕಟಿಗ ಹೇಳುವ ಕತೆಯ ಮೂಲಕವೆ ಬರುತ್ತದೆ. ಈ ಕಥೆಯುದ್ದಕ್ಕೂ ವರ್ಣನೆಯ ವಿವರಗಳು, ವೃತ್ತಾಂತದ ವಿವರಗಳು, ಸಂಭಾಷಣೆಯ ಅಂಶಗಳು ಒಂದಕ್ಕೊಂದು ಪೂರಕವಾಗಿ, ಒಂದರಲ್ಲೊಂದು ಹೆಣೆದುಕೊಂಡು, ಕತೆಯ ಪಾತ್ರ ಜೀವಂತವಾಗಿರುತ್ತದೆ.

ಈ ಮೇಲಿನ ಹಲವು ಕತೆಗಳನ್ನು ವಸ್ತುವಿನ ನೆಲೆಯಲ್ಲಿ ಎಲ್ಲ ಸಾಮಾಜಿಕ ಕತೆಯನ್ನು ವಿಶ್ಲೇಷಿಸದೆ ಕೆಲವೊಂದನ್ನು ಮಾತ್ರ ಹೇಳಲಾಗಿದೆ. ಆದರೂ ಒಂದು ಕತೆಯಂತೆ ಮತ್ತೊಂದು ಕತೆ ಇಲ್ಲವೆನಿಸುತ್ತದೆ.

### ೩.೨ ಚಾರಿತ್ರಿಕ ಅಂಶಗಳನ್ನು ಒಳಗೊಂಡ ಕಥೆಗಳು.

ಮಾಸ್ತಿಯವರು ತಮ್ಮ ಜೀವನದ ಅವಧಿಯಲ್ಲಿ ಬರೆದಂತಹ ಕತೆಗಳಲ್ಲಿ ಸುಮಾರು ಅರ್ಧದಷ್ಟು ಸಾಮಾಜಿಕ ಕತೆ ಬರೆದರೆ ನಂತರದ ಸ್ಥಾನ ಐತಿಹಾಸಿಕ

---

ಅಡಿ ಟಿಪ್ಪಣಿ : ೧೭ ಸಣ್ಣ ಕಥೆ -೨ : ಪುಟ-೪೫
ಅಡಿ ಟಿಪ್ಪಣಿ : ೧೮ಸಣ್ಣ ಕಥೆ -೨ : ಪುಟ-೪೮

ಕತೆಗಳಿಗೆ ನೀಡಿರುತ್ತಾರೆ. ಅವರ ಮೊದಲ ಕಥಾ ಸಂಕಲನದ ಬಾದಷಹನ ನ್ಯಾಯದಿಂದ ಪ್ರಾರಂಭಗೊಂಡು ಇತ್ತೀಚಿನ ಕೊನೆಯ ೧೫ನೇ ಕಥಾ ಸಂಕಲನದ ಪೋಲೋನಿಯಾ ಹೇಳಿಕೆವರೆಗೆ ಸುಮಾರು ೩೭ ಐತಿಹಾಸಿಕ ಕತೆಯನ್ನು ಬರೆದಿದ್ದಾರೆ.

ಮಾಸ್ತಿಯವರಿಗೂ ಮೊದಲು ಪಂಜೆಮಂಗೇಶರಾಯರು ಕೆರೂರು ವಾಸುದೇವಾಚಾರ್ಯರು, ಐತಿಹಾಸಿಕ ಕತೆಗಳನ್ನು ಬರೆದಿದ್ದರು. ಪಂಜೆಯವರ ಕತೆ ಭಾರತೀಯ ಚರಿತ್ರೆಗೆ ಸಂಬಂಧ ಪಟ್ಟರೆ ಕೆರೂರರ ಕತೆಯು ಭಾರತೀಯ ಚರಿತ್ರೆಯಲ್ಲದೆ ಪಾಶ್ಚಾತ್ಯ ಚರಿತ್ರೆಯಿಂದಲೂ ವಸ್ತುಗಳನ್ನು ಆಯ್ದು ಕತೆ ರಚಿಸಿದ್ದಾರೆ.

ಪಂಜೆಂಂಗೇಶರಾಯರು, ಕೆರೂರ ರಂತೆ ಮಾಸ್ತಿಯವರು ಸಹ ಹಲವು ಮೂಲಗಳಿಂದ ತಮ್ಮ ಕತೆಗಳಿಗೆ ಆರಿಸಿದ್ದಾರೆ. ಆದರೆ ಅವರಿಗಿಂತ ಮಾಸ್ತಿಯವರಿಗೆ ಸಣ್ಣ ಕತೆಯನ್ನು ಪರಿಕಲ್ಪನೆ ಸ್ಪಷ್ಟವಾಗಿದೆ. ಆರೀತಿಯ ಮನೋಭೂಮಿಕೆಯನ್ನು ಇವರ ಮೊದಲ ಐತಿಹಾಸಿಕ ಕತೆ "ಬಾದಷಹನ ನ್ಯಾಯ" ದಲ್ಲೇ ಕಾಣಬಹುದಾಗಿದೆ. ಮಾಸ್ತಿಯವರು ತಮ್ಮ ಐತಿಹಾಸಿಕ ಕತೆಗಳಿಗೆ ವಸ್ತುಗಳನ್ನೂ ಭಾರತೀಯ ಮತ್ತು ವಿದೇಶೀಯರ ಚರಿತ್ರೆಯಿಂದ ಅಯ್ದುಕೊಂಡಿದ್ದಾರೆ. ಆದರೂ ಭಾರತೀಯ ಚರಿತ್ರೆಗಿಂತ ವಿದೇಶಿಯರ ಚರಿತ್ರೆಯನ್ನು ಕುರಿತು ಹೆಚ್ಚು ಕೆತೆ ರಚಿಸಿದ್ದಾರೆ. ಬಹುಶಃ ವಿವಿಧ ರಾಷ್ಟ್ರಗಳ ಜೀವನ ಕತೆಯನ್ನು ತೋರಿಸುವುದಿರಬಹುದು. ಭಾರತೀಯ ಕತೆಗಳನ್ನು ಒಟ್ಟಿನಲ್ಲಿ ಗಮನಿಸಿದಾಗ ಈ ಅಂಶ ಇನ್ನೂ ಹೆಚ್ಚು ಸ್ಪಷ್ಟ ಆಗುತ್ತದೆ. ಭಾರತದಲ್ಲಿ ಸಮೃದ್ಧ ಚರಿತ್ರೆಯಿದ್ದರೂ ಮಾಸ್ತಿಯವರು ತುಂಬಾ ಪ್ರಖ್ಯಾತವಾದ. ಪ್ರಚಲಿತವಾದ ಚೆರಿತ್ರೆಯನ್ನು ತಮ್ಮ ಕತೆಗಳಿಗೆ ಆರಿಸ ಹೋಗಿಲ್ಲ.

ಮಾಸ್ತಿಯವರ ಚಾರಿತ್ರಿಕ ಕತೆಗಳಲ್ಲಿ ವಿದೇಶದ ಚರಿತ್ರೆ ಕುರಿತ ಕತೆಗಳಿಗೂ ಭಾರತೀಯ ಚರಿತ್ರೆ ಕುರಿತ ಕತೆಗಳಿಗೂ ಕೆಲವು ವ್ಯತ್ಯಾಸಗಳಿವೆ. ಬಾರತೀಯ ಇತಿಹಾಸವನ್ನು ಕುರಿತ ಬಹುತೇಕ ಕತೆಗಳು ಚರಿತ್ರೆಯ ಒಂದು ಸಣ್ಣ ಸಂಗತಿಯ ಆಧಾರದ ಮೇಲೆ ರೂಪಿತವಾಗಿದೆ. ವಿದೇಶದ ಚರಿತ್ರೆಯ ಕತೆಗಳನ್ನು ನೋಡುವಾಗ ಮಾಸ್ತಿಯವರ ಕತೆಗಳಲ್ಲಿ ರೂಪಿತವಾಗುವ ಜೀವನ ಮತ್ತು ಅವರ ಐತಿಹಾಸಿಕ ವಸ್ತುಗಳ ಆಯ್ಕೆ ಮಂತ್ರ ಮುಖ್ಯ ಆಗುತ್ತದೆ.

ಮಾಸ್ತಿಯವರ ಕತೆಯಲ್ಲಿ ಮೊದಲನೆಯ ಐತಿಹಾಸಿಕ ಕತೆ "ಬಾದಷಹನ ನ್ಯಾಯ" ಈ ಕತೆಯಲ್ಲಿ ಪರ್ಷಿಯಾದ ರಾಜನಾಗಿದ್ದ ಷಾಹ ಅಬ್ಬಾಸನ ಜೀವನಸ ಎರಡು ಘಟನೆಗಳನ್ನು ಕುರಿತು ಚಿತ್ರಿಸುತ್ತದೆ. ಆತನದು ತೀಕ್ಷ್ಣ ಬುದ್ಧಿ ಹೊಂದಿರುವಂತದ್ದು. ಮಾತಿಯಾ ಮತ್ತು ಯೂಸೂಫ್ ಖಾನ್ ಎಂಬ ಇಬ್ಬರು ವ್ಯಾಪಾರಿಗಳಲ್ಲಿ ವ್ಯಾಪಾರಕ್ಕೆ ಸಂಬಂಧ ಪಟ್ಟಂತೆ ಒಂದು ವಿವಾದ ಬಾದಷಹನ ದರ್ಬಾರಿಗೆ ತೀರ್ಮಾನಕ್ಕೆ ಬರುತ್ತದೆ. ಮಾತಿಯ ಕ್ರಿಶ್ಚಿಯನ್ ವ್ಯಕ್ತಿ ಯೂಸೂಫ್ ಖಾನ್ ಮುಸ್ಲಿಂ ವ್ಯಕ್ತಿ. ಯೂಸೂಫ್ ಖಾನ ಅತ್ಯಂತ ಜಾಣತನದಮೋಸ ಮಾಡಿರುತ್ತಾನೆ. ಬಾದಷಹನ ದರ್ಬಾರಿನಲ್ಲಿ ಬುದ್ದಿವಂತರೆನಿಸಿದ ಫಸೀಲನಿಗೂ ಸಾಧ್ಯವಾಗದಿದ್ದ ನ್ಯಾಯ ವಿತರಣೆ ಬಾದಷಹನಿಂದ ಆಗುತ್ತದೆ. ಬಾದಷಹ ಉಪಾಯವೊಂದನ್ನು ಹೂಡಿ ಯೂಸೂಫ್‌ಖಾನನ ಮೋಸ ಕಂಡುಹಿಡಿಯುತ್ತಾನೆ. ಬಾದಷಹನ ನ್ಯಾಯ ನಿಷ್ಠೆ ಮತ್ತು ಪ್ರಾಮಾಣಿಕತೆಯನ್ನು ಹೇಳುವುದು ಕತೆಯ ಉದ್ದೇಶವಾದಂತೆ ಕಾಣುತ್ತದೆ.

'ಬಾದಷಹನ ನ್ಯಾಯ' ಮುಂದುವರೆದ ಭಾಗವಾಗಿ 'ಬಾದಷಹನ ದಂಡನೆ' ಎಂಬ ಕತೆಯು ಬರುತ್ತದೆ. ತನ್ನ ಮಗ ತಪ್ಪು ಮಾಡಿದರೂ ನ್ಯಾಯಕ್ಕಾಗಿ ಅವನನ್ನೇ ಬಲಿ ಕೊಡಲು ಬಾದಷಹ ಸಿದ್ದನಾಗುವ ಘಟನೆಯನ್ನು ಕಥೆ ಹೇಳುತ್ತದೆ. 'ಬಾದಷಹನ ನ್ಯಾಯ' ಕತೆಯ ರಚನೆಯಲ್ಲಿ ನೇರವಾಗಿ ಕತೆ ಹೇಳಿಕೊಂಡು ಹೋಗುವ ಸಂವಿಧಾನವಿದೆ. ಇಲ್ಲಿ ಸಂಭಾಷಣೆಯ ಮೂಲಕ

ಬಾದಷಹನ ಮನಸ್ಸನ್ನು ಕೆದಕುತ್ತಾ ಅವನ ನ್ಯಾಯದ ಕಲ್ಪನೆಯನ್ನು ಕತೆ ಮನವರಿಕೆ ಮಾಡಿಕೊಡುತ್ತದೆ. ರಾಜಕುಮಾರನೆಂದು ಹೇಳಿಕೊಂಡು ಕ್ರಿಶ್ಚಿಯನ ಹುಡುಗಿಯೊಬ್ಬಳನ್ನು ಕಾಡಿಸುತ್ತಿದ್ದ ಅಪರಾಧಕ್ಕಾಗಿ ಮಗನ ಸ್ನೇಹಿತನನ್ನು ತನ್ನ ಮಗನೆಂದೇ ಭಾವಿಸಿ ಕೊಲೆ ಮಾಡುತ್ತಾನೆ. ಆದರೆ ತಾನು ಕೊಲೆ ಮಾಡಿದುದು ತನ್ನ ಮಗ ಅಲ್ಲ ಎನ್ನುವುದು ತಿಳಿಯುತ್ತದೆ. ಮಗನ ಬಗೆಗೆ ತಾನೇ ನಿರ್ಧಾರ ಕೈಗೊಳ್ಳುವ ಬಾದಷಹ ತಾನು ಕೊಲೆ ಮಾಡಿದ್ದು ಮಗನನ್ನಲ್ಲ ಎನ್ನುವುದು ತಿಳಿದಾಗ ಅವನ ಕಣ್ಣು ಹನಿಗೂಡುತ್ತದೆ. ಈ ಕತೆಯಲ್ಲೂ ಬಾದಷಹನ ವ್ಯಕ್ತಿತ್ವ ಕೀರ್ತಿಸುವುದಷ್ಟೆ ಕಥೆಗಾರರ ಉದ್ದೇಶವಾಗಿದೆ.

ಭಾರತದ ಇತಿಹಾಸ ಕುರಿತಂತೆ ತಿಳಿಸುವ ಮತ್ತೊಂದು ಪ್ರಮುಖವಾದ ಕತೆ 'ನಿಜಗಲ್ಲಿನ ರಾಣಿ' ವ್ಯಕ್ತಿಗೂ-ಮೌಲ್ಯಕ್ಕೂ ಇರುವ ಸಂಬಂಧ ಈ ಕಥಾ ವಸ್ತುವಾಗಿದೆ. ಕತೆಯ ಕೇಂದ್ರ ಪಾತ್ರವಾದ ಗಿರಿಜವ್ವೆಯು ಒಂದು ಪಾಳೆಯ ಪಟ್ಟಿನ ರಾಣಿಯಾಗಿದ್ದಳು. ಚರಿತ್ರೆಗೆ ಸಂಬಂಧಿಸಿದ ಕಥೆಗಳನ್ನು ಬರೆಯುವುದು ಕಷ್ಟವಾದರೂ ಶ್ರೀನಿವಾಸರು ಈ ಕೆಲಸವನ್ನು ಬಹಳ ಯಶಸ್ವಿಯಾಗಿ ನೆರವೇರಿಸಿದ್ದಾರೆ. ಈ ಕತೆಯಲ್ಲಿಯ ಅವರ ಶೈಲಿಗೂ ಉಳಿದ ಕತೆಗಳ ಶೈಲಿಗೂ ವ್ಯತ್ಯಾಸವುಂಟು. ಇಲ್ಲಿ ಮಾತುಗಳು ಗುರಿಯನ್ನು ಕುರಿತು ಒಂದೇ ಸಮನೆ ನಾಗಾಲೋಟದಲ್ಲಿ ದೌಡಾಯಿಸುತ್ತವೆ. ೧೯

ಈ ಕತೆಯಲ್ಲಿ ಗಿರಿಜವ್ವೆಯ ವ್ಯಕ್ತಿತ್ವ ಆರಂಭದಲ್ಲಿಯೇ ದೋಷಿತಗೊಂಡಿದೆ ಏಕೆಂದರೆ ಮಕ್ಕಳಾಗಲಿಲ್ಲವೆಂಬ ಕಾರಣದಿಂದ ರಾಜನಾದ ರಾಮರಸನ ಹೆಂಡತಿ ಲಕುಮವ್ವೆ ತನ್ನ ಸಂಬಂಧಿಗಳಾದ ಗಿರಿಜವ್ವೆಯನ್ನು ತನಗೆ ಸವತಿಯಾಗಿ ತಂದುಕೊಳ್ಳುತ್ತಾಳೆ.

ಲಕುಮವ್ವೆಯನ್ನು ಅರ್ಥ ಮಾಡಿಕೊಂಡಿರುವ ಗಿರಿಜವ್ವೆ ತನ್ನ ಗಂಡನಿಗೂ ಲಕುಮವ್ವೆಗೂ ನಡುವೆ ಮನಸ್ತಾಪ ತಂದು ಹಾಕುವ ಯಾವ ಪ್ರಯತ್ನವನ್ನೂ ವಳು ಪ್ರೋತ್ಸಾಹಿಸುವುದಿಲ್ಲ; ಆದರೆ, ಅವಳ ತಮ್ಮನಿಂದಾಗಿ ರಾಜ್ಯದಲ್ಲಿ ಸಣ್ಣಪುಟ್ಟ

ಅಡಿ ಟಿಪ್ಪಣಿ:೧೯. ಶ್ರೀನಿವಾಸ , ಮಾವಿನಕೆರೆ ರಂಗನಾಥ್. ಪುಟ-೬೦

ಗಲಾಟೆಗಳಾಗುತ್ತವೆ. ಅವಳ ತಮ್ಮ ಕಸ್ತೂರಿ ಹಳ್ಳಿಯಲ್ಲಿ ಪೋಲಿಯಾಗಿದ್ದವ ಅರಮನೆಗೆ ಬಂದು ಪುಂಡನಾಗುತ್ತಾನೆ.೨೦ ಮುಂದೆ ಆತ ತಪ್ಪು ಮಾಡಿದಾಗ ಗಿರಿಜವ್ವೆಗೆ ನೋವುಂಟಾಗುತ್ತದೆ.

ಮುಂದೆ ರಾಮರಸನ ಕೊಲೆಯಾಗುತ್ತದೆ. ಆದರೆ ರಾಮರಸನ ಕೊಲೆಯಾಗುವವರೆಗೆ ಗಿರಿಜವ್ವೆಯ ವ್ಯಕ್ತಿತ್ವ ಸೌಮ್ಯವಾಗಿರುತ್ತದೆ. ಇವಳ ಈ ವ್ಯಕ್ತಿತ್ವದಿಂದಾಗಿ ಅಲ್ಲಿನ ಜನತೆಯಲ್ಲಿ ಗೌರವದ ವ್ಯಕ್ತಿಯೂ ಆಗಿದ್ದಾಳೆ. ಮುಂದೊಮ್ಮೆ ವಿಧಿಯಾಟದಿಂದಾಗಿ ಮರಾಠ ನಾಯಕ ಗಿರಿಜವ್ವೆಯನ್ನು ಮದುವೆಯಾಗಲು ಒಲಿಸುತ್ತಾನೆ. ಈ ಸನ್ನಿವೇಶ ಆ ರಾಜ್ಯದ ಜನತೆಗೆ, ಓದುಗರಿಗೆ ಅವಳ ಬಗೆಗೆ ಅಸಹ್ಯದ ಭಾವನೆ ಬೆಳೆಯುವಂತೆ ಮಾಡುತ್ತದೆ. ಆದರು ಸಹ ಮುಂದೆ ತನ್ನ ಗಂಡನಾದ ರಾಮರಸನಿಗೆ ಮಾಡಿದ ಅನ್ಯಾಯವನ್ನು ಹೇಳಿ ಅವನು ಉಳಿಯಬಾರದೆಂದು ಕೊತ್ತಳದ ಕೆಳಕ್ಕೆ ಅವನನ್ನು ಎಳೆದುಕೊಂಡು ದುಮುಕಿ ಸಾಯುತ್ತಾಳೆ

ಹೀಗೆ ಗಿರಿಜವ್ವೆ ಆಕೆ ಹುಟ್ಟಿ-ಬೆಳೆದ ಸಂಸ್ಕೃತಿಯ ಮೌಲ್ಯಗಳಲ್ಲಿ ನಿಷ್ಠೆಯಿಂದ ಬದುಕುತ್ತಿದ್ದಾಳೆ. ಇಂಥವಳು ಆ ಮೌಲ್ಯವನ್ನು ಮೀರಿ ಹೋಗುವ ಮಾತನಾಡುವುದು ಜನತೆಯಲ್ಲಿ ಅಸಹ್ಯದ ಭಾವನೆ ಹುಟ್ಟಲು ಕಾರಣವಾಗುತ್ತದೆ. ಆದರೆ ಆಕೆ ಆ ಮೌಲ್ಯವೇ ಹಿರಿದು ಎನ್ನುವುದನ್ನು ಕೊನೆಯಲ್ಲಿ ತೋರಿಸುತ್ತಾಳೆ. ಹೀಗೆ ತೋರಿಸುವಲ್ಲಿ ಅವಳಿಗಿರುವ ಒಂದೇ ದಾರಿ ಆತ್ಮಹತ್ಯೆ ಮಾಡಿಕೊಳ್ಳುವುದು. ಇದರಿಂದ ಆಕೆ ಎರಡು ಕಾರ್ಯ ಸಾಧಿಸಿ ತೋರಿಸುತ್ತಾಳೆ. ಒಂದು ತನ್ನ ತಮ್ಮನ ಹಿಡಿತದಿಂದ ಆ ರಾಜ್ಯ ಬಿಡಿಸುವುದು ಎರಡನೇಯದಾಗಿ ತಾನು ಮರಾಠ ದಳಪತಿಯನ್ನು ಮದುವೆಯಾಗದೆ ತನ್ನ ಪಾತಿವ್ರತ್ಯವನ್ನು ಉಳಿಸಿಕೊಳ್ಳುವುದು. ಒಟ್ಟಿನಲ್ಲಿ ಈ ಕತೆಯಲ್ಲಿ ಗಿರಿಜವ್ವೆಯ ಸಾವು ನಿಜವಾಗಿ ದುರಂತವಾಗಿದೆ. ಆದರೂ ದುರಂತದಂತೆ ಕಾಣದೆ ಆಕೆಯ ಮೌಲ್ಯವನ್ನು ಎತ್ತಿ ಹಿಡಿಯುವಂತಹ ಕಾರ್ಯ ನೆರವೇರಿದೆ.

---

೨೦ ಟಿಪ್ಪಣಿ ೨೦. ನಾ.ಸ.ಕ. ಪುಟ-೨೨

ಮತ್ತೊಂದು ಐತಿಹಾಸಿಕ ಕತೆ "ಪೆನುಕೊಂಡೆಯ ಕೃಷ್ಣಮೂರ್ತಿ" ಎಂಬ ಕತೆ ಒಂದು ಸಂಸ್ಕೃತಿಯ ಆಸಕ್ತಿಯಿಲ್ಲದೆ ಮರೆಮಾಚುತ್ತಿರುವುದನ್ನು ಹೇಳುತ್ತದೆ. ವಿಜಯನಗರದ ಚರಿತ್ರೆಗೆ ಸಂಬಂಧಿಸಿದ ಸಂಗತಿ ಈ ಕತೆಯನ್ನು ರೂಪಿಸಿದೆ. ಶ್ರೀರಂಗ ಪೆನುಕೊಂಡೆಯ ರಾಜನಾದ ಮೇಲೆ ಸುಖಲೋಲುಪತೆಯಲ್ಲಿ ಮುಳುಗುತ್ತಾನೆ. ತಾಯಿ ಲಕುಮಾಂಬೆ ರಾಜ್ಯದ ಸೂತ್ರಧಾರಳಾಗುತ್ತಾಳೆ. ಮಗ ಚಿಕ್ಕವನಾಗಿದ್ದಾಗ ಅವನ ಹೆಸರಿನಲ್ಲಿ ಆಕೆ ರಾಜ್ಯ ನಡೆಸುತಾಳೆ. "ರಾಜ್ಯ ಎನ್ನುವುದು ಒಂದಿರಬೇಕಾದರೆ ಅದರ ಜನವೆಲ್ಲ ಒಂದು ಮುಖವಾಗಿ ಒಪ್ಪಬಹುದಾದ ಉದ್ದೇಶ ರಾಜನಲ್ಲಿ ಕಾಣಬೇಕು ಎಂದು ಅವಳು ಬಲ್ಲಳು. ರಾಷ್ಟ್ರಕ್ಕೆ ಒಳ್ಳೆಯದನ್ನು ಮಾಡುತ್ತೇನೆ ಎನ್ನುವುದು; ರಾಷ್ಟ್ರದ ಜನದ ಇಚ್ಛೆಯಂತೆ ಅವರ ಕಷ್ಟ ಸುಖಗಳನ್ನು ನೋಡುತ್ತೇನೆ ಎನ್ನುವುದು; ಎಲ್ಲರಿಗೂ ಹಿರಿಯವನು ದೇವರು ಎನ್ನುವುದು, ಎಲ್ಲದಕ್ಕೂ ಹಿರಿಯದು ಧರ್ಮ, ದೇವರನ್ನು ಪೂಜಿಸುತ್ತೇನೆ ಧರ್ಮವನ್ನು ಅರ್ಜಿಸುತ್ತೇನೆ ಎನ್ನುವುದು; ಇವು ಇಂಥ ಉದ್ದೇಶಗಳು"೨೧ ಅವಳ ಈ ಉದ್ದೇಶಕ್ಕೆ ವಿರುದ್ಧವಾಗಿ ಮಗ ಶ್ರೀರಂಗ ನಡೆದುಕೊಳ್ಳುತ್ತಾನೆ. ಅವರ ಉಡಾಫೆಯಿಂದಾಗಿ ರಾಜ್ಯದ ಮೇಲೆ ಮುಸ್ಲಿಮರು ಧಾಳಿ ಮಾಡುತ್ತಾರೆ.

ಸುಮಾರು ಇನ್ನೂರು ವರ್ಷಗಳ ನಂತರ ಆ ಪ್ರದೇಶದಲ್ಲಿ ಸಂಶೋಧನೆ ನಡೆಸುವಾಗ ಮೂಳೆ ಮತ್ತು ಕೃಷ್ಣಮೂರ್ತಿಯ ವಿಗ್ರಹ ಸಿಗುತ್ತದೆ. ಆ ಮೂಳೆ ಮತ್ತು ಕೃಷ್ಣಮೂರ್ತಿಯನ್ನು ಇಂದಿನ ಜನತೆ ನೋಡುವ ದೃಷ್ಟಿಯನ್ನು ಈ ಕತೆ ಹೇಳುತ್ತದೆ. ಮತ್ತೊಂದು ಚಾರಿತ್ರಿಕ ಕಥೆಯನ್ನು ನೋಡುವುದಾದರೆ "ಡುಬಾಯಿ ಪಾದ್ರಿಯ ಒಂದು ಪತ್ರ" ಎಂಬುದರಲ್ಲಿ ಭಾರತದ ಇತಿಹಾಸವನ್ನು ನೋಡುವ ವ್ಯಕ್ತಿ ಒಬ್ಬ ಪಾಶ್ಚಾತ್ಯನು ಆಗಿದ್ದಾನೆ. ಈತ ಈ ಕತೆಯನ್ನು ಚರಿತ್ರೆಕಾರ ಪೂರ್ವಾಗ್ರಹದೊಂದಿಗೆ ಚರಿತ್ರೆಯನ್ನು ನೋಡುವುದನ್ನು ಹೇಳುತ್ತದೆ. ಈ ಕತೆಯ ಮೂಲ ಆಕರ ಅಬ್ಬೆ, ಜೆ. ಡುಬಾಯಿ ಎಂಬಾತನ "ಹಿಂದೂ ಮ್ಯಾನರ್ಸ್ ಅಂಡ್ ಕಸ್ಟಮ್ಸ್" ಎಂಬ ಗ್ರಂಥ. ಈ ಪುಸ್ತಕದಲ್ಲಿ ಡುಬಾಯಿ ತಾನು ಕಂಡಂತೆ,

---

೨ ಟಿಪ್ಪಣಿ:೨೧. ಸ.ಕ.೪ : ಪುಟ-೧೯

ಕೇಳಿದಂತೆ ಇರುವ ಹಿಂದೂ ಧರ್ಮವನ್ನು ಕುರಿತು ಬರೆದಿದ್ದಾನೆ. ಅವನ ತಿಳುವಳಿಕೆಯಲ್ಲಿ ಹಲವು ತಪ್ಪು ಗ್ರಹಿಕೆಗಳಿವೆ. ಈ ತಪ್ಪು ಗ್ರಹಿಕೆಯ ಒಂದು ಉದಾಹರಣೆ ಎಂಬಂತೆ ಕತೆ ರೂಪಿತವಾಗಿದೆ.

೧೭೯೯ ರಲ್ಲಿ ಟಿಪ್ಪು ಸೋತು ಶ್ರೀರಂಗಪಟ್ಟಣ ಇಂಗ್ಲೀಷರ ಕೈಗೆ ಬಂದಾಗ ಡುಬಾಯಿ ಕ್ರೈಸ್ತ ಮತ ಪ್ರಚಾರಕನಾಗಿ ಶ್ರೀರಂಗಪಟ್ಟಣಕ್ಕೆ ಬರುತ್ತಾನೆ. ಈತ ಶ್ರೀರಂಗಪಟ್ಟಣದಿಂದ ತನ್ನೂರಿಗೆ ಅಧಿಕಾರಿಗಳಿಗೆ ಬರೆದ ಪತ್ರ ಎಂದು ಕಲ್ಪಿಸಿ ಕತೆ ಕಟ್ಟಲ್ಪಟ್ಟಿದೆ. ಡುಬಾಯಿ ತನ್ನ ಚರಿತ್ರೆಯ ಗ್ರಂಥದಲ್ಲಿ ಮತಾಂತರ ಕುರಿತು ಬರೆಯುತ್ತಾ ಜಾತಿಯ ತಪ್ಪುಗಳ ಬಗೆಗೆ ಇದ್ದ ಶಿಕ್ಷೆಗೆ ಉದಾಹರಣೆಯಾಗಿ ಹಲವು ಸಂದರ್ಭಗಳನ್ನು ಕೊಡಬಹುದು. ಹಿಂದೆ ಮುಸಲ್ಮಾನ ರಾಜನೊಬ್ಬ ರಾಜ್ಯವಾಳುತಿದ್ದಾಗ ಹಲವಾರು ಹಿಂದೂಗಳನ್ನು ಬಲವಂತದಿಂದ ಮತಾಂತರಗೊಳ್ಳುವಂತೆ ಮಾಡುತ್ತಿದ್ದ. ಮತಾಂತರದ ಪ್ರಸಂಗದಲ್ಲಿ ಬ್ರಾಹ್ಮಣ ಸಮಾಜವನ್ನು ಆಧಾರವಾಗಿಟ್ಟುಕೊಂಡು ಅವರ ತೊಂದರೆ-ಅನುಕೂಲಗಳನ್ನು ಪ್ರಸ್ತಾಪಿಸುತ್ತಾನೆ.

ಅಂತೆಯೇ ಈ ಕತೆ ಹೇಳುವ ಡುಬಾಯಿ ಹಿಂದುಗಳನ್ನು ಕ್ರಿಶ್ಚಿಯನ್ನರನ್ನಾಗಿ ಪರಿವರ್ತಿಸಲು ಇರುವ ತೊಂದರೆ ಪ್ರಸ್ತಾಪಿಸುತ್ತಾನೆ. ತನ್ನ ಪತ್ರದಲ್ಲಿ ಹಿಂದೂ ಸಮಾಜದ ಬಗೆಗೆ ಹಲವು ಬಗೆಯ ಟೀಕೆ ಮಾಡುತ್ತಾನೆ.

ಮತ್ತೊಂದು ಚಾರಿತ್ರಿಕ ಕಥೆ ದಕ್ಷಿಣ ಅಮೆರಿಕಾ ಖಂಡದ ಹಿಂದಿನ ಚರಿತ್ರೆಯಲ್ಲಿನ ಒಬ್ಬ ರಾಜ ನೇಷ್‌ಹುವಲಿನ ಜೀವನದ ಏರುಪೇರುಗಳನ್ನು ತಿಳಿಸುವಂತೆ ಕತೆಯಾಗಿದೆ, ಅದುವೇ 'ನೇಷುವಲ್ ಕೋಯೋಟೆಲ್' ರಾಜ್ಯ ಕಳೆದುಕೊಂಡ ವ್ಯಕ್ತಿ ತನ್ನ ದೃಢ ಸಂಕಲ್ಪದಿಂದ ಮತ್ತೆ ಅದನ್ನು ಪಡೆಯುವುದು ಇಲ್ಲಿನ ಕತೆಯಾದರೂ, ವ್ಯಕ್ತಿಯ ಗುರಿಗಳಿಂದಾಗಿ ಒಂದು ವ್ಯವಸ್ಥೆಯನ್ನು ನಿರ್ಮಿಸುವುದನ್ನು ಕತೆ ಹೇಳುತ್ತದೆ. ಈ ಕತೆಯ ಚರಿತ್ರೆಯ ಪುನರ್ನಿರ್ಮಾಣ ಮಾತ್ರವಾಗಿದೆ. ಕೋಯೋಟೆಲ್ ಜನರನ್ನು ತನ್ನ ಪ್ರೀತಿ ಆದರಗಳ ಸಹಾಯದಿಂದ ಸಂಘಟಿಸಿ ತನ್ನ ತಂದೆ ಕಳೆದುಕೊಂಡ ರಾಜ್ಯವನ್ನು ಮತ್ತೆ

ಪಡೆಯುವುದು ಈ ಕತೆಯ ಮೊದಲ ಭಾಗ, ಆತನ ರಾಜ್ಯಾಡಳಿತ ಕುರಿತದ್ದು ಕತೆಯ ಎರಡನೇ ಭಾಗ. ಕೋಯೋಟಲ್‌ನ ಈ ಕತೆ ರಜಪೂತ ರಾಜ ರಾಣಾಪ್ರತಾಪ ಸಿಂಹನ ಕತೆಯನ್ನು ಹೋಲುತ್ತದೆ. ಈ ಅಂಶವನ್ನು ಕತೆ ತನ್ನಲ್ಲಿ ಕಲಾತ್ಮಕವಾಗಿ ಬಳಸಿಕೊಂಡಿದ್ದರೆ ಬೇರೆಯ ಆಯಾಮ ಪಡೆಯಬಹುದಿತ್ತು. ಕೊನೆಯಲ್ಲಿ ಇಂದಿನ ಜನತೆ ಅಂಥ ರಾಜನನ್ನು ಮರೆತಿರುವುದನ್ನು ಕುರಿತ ವ್ಯಥೆಯನ್ನು ಕತೆ ಸೂಚಿಸುತ್ತದೆ.

**೩.೩ ಪೌರಾಣಿಕ ಅಂಶಗಳನ್ನು ಒಳಗೊಂಡ ಕತೆ**

ಮಾಸ್ತಿಯವರು ಪೌರಾಣಿಕ ಸಾಹಿತ್ಯದಿಂದ ವಸ್ತುವನ್ನು ಆರಿಸಿದಾಗ ಮೂಲವನ್ನು ಹೆಚ್ಚು ಬದಲಿಸಲು ಹೋಗುವುದಿಲ್ಲ. ಮೂಲಕ್ಕೆ ಬದ್ಧರಾಗಿಯೇ ನಡೆದುಕೊಳ್ಳುತ್ತಾರೆ. ಆದರೆ ಮೊಲದ ಕತೆಯನ್ನು ಶೋಧಿಸಿ ಕಥಾರೂಪಕ್ಕೆ ಇಳಿಸುತ್ತಾರೆ. ಇಲ್ಲಿ ಬರುವ 'ಕುಚೇಲನ ಭಾಗ್ಯ' ಕತೆಯೊಂದನ್ನು ಬಿಟ್ಟರೆ ಪ್ರಾಚೀನ ಕಾವ್ಯದ ಕತೆಯನ್ನು ಪುನರ್ ನಿರ್ಮಿಸಲು ಹೋಗಿಲ್ಲ. ಪ್ರಾಚೀನ ಕಾವ್ಯದಲ್ಲಿ ಗ್ರಂಥಗಳಲ್ಲಿ ಸಿಗುವ ಒಂಸು ಕತೆ ಅಥವಾ ಸಂಗತಿಯ ಆಧಾರದ ಮೇಲೆ ತಮ್ಮ ಕಲ್ಪನೆಯಿಂದ ಹೊಸ ಕತೆಯನ್ನೇ ನಿರ್ಮಿಸಿದ್ದಾರೆ.

ಮಾಸ್ತಿಯವರ "ಒಂದು ಹಳೆಯ ಕತೆ" ಎಂಬ ಪೌರಾಣಿಕ ಕತೆಯಲ್ಲಿ ವ್ಯಕ್ತಿ ಆರೋಪಿಸಿಕೊಂಡ ಮೌಲ್ಯಕ್ಕೂ ಪ್ರವೃತ್ತಿಗೂ ಇರುವ ಸಂಘರ್ಷ ವಸ್ತುವಾಗಿದೆ. ಈ ಕತೆಯ ಮೂಲವನ್ನು ಕುರಿತು ಬರೆಯುತ್ತಾ ಈ ಕತೆ ಚಿಕ್ಕಂದಿನಲ್ಲಿ ತಮ್ಮ ಕಿವಿಗೆ ಬಿದ್ದದ್ದು ಎನ್ನುತ್ತಾರೆ. ಮೂಲ ಕತೆಯನ್ನು ನೀಡಿದ್ದಾರೆ ಇವರ ಈ ಕತೆಯ ಗಂಡು-ಹೆಣ್ಣಿನ ಸಂಬಂಧವನ್ನು ತಿಳಿಸುವುದಾಗಿದೆ.

ಒಂದು ದಿನ ಸಂಜೆ ಮಳೆಯಲ್ಲಿ ನಡೆದು ಬಂದ ಒಬ್ಬ ಹೆಂಗಸು, ತಾನು ದಾರಿ ತಪ್ಪಿ ಬಂದಿದ್ದೇನೆ. ರಾತ್ರಿ ಆಶ್ರಮದಲ್ಲಿ ತಂಗುವುದಕ್ಕೆ ಅಪ್ಪಣೆ ಬೇಕು, ಎಂದು ಕೇಳಿದಳು ಸಂನ್ಯಾಸಿ ಒಬ್ಬನು ಆಗಲಿ ಎಂದನು. ಹೆಂಗಸು ರಾತ್ರಿ ಊಟವಾದ ಮೇಲೆ ಇವರು ತೋರಿಸಿದ ಒಂದು ಕೋಟೆಯಲ್ಲಿ ಮಲಗಿದಳು. ಸಂನ್ಯಾಸಿಗೆ ಅವಳು ಬಲು ಚೆಲುವೆ ಎಂದು ಕಂಡಿತ್ತು. ರಾತ್ರಿ ಅವನು ಅವಳ

ಸಹವಾಸವನ್ನು ಬಯಸಿ ಅವಳು ಮಲಗಿದ್ದ ಕೋಣೆಯ ಬಾಗಿಲನ್ನು ತಟ್ಟಿದನು. ನಂತರ ಆ ಹೆಂಗಸು ಎದ್ದು, ಯಾರು ಎಂದು ಕೇಳಲು ತನ್ನ ಗುರುತು ಹೇಳಿಕೊಂಡನು. ಅವಳು ಬಾಗಿಲನ್ನು ತೆರೆಯುವುದಿಲ್ಲ ಎಂದಾಗ ಈತ ಬಾಗಿಲನ್ನೇ ನೂಕಿದನು ಆಗ ಬಾಗಿಲು ತೆರೆಯಿತು. ಆದರೆ ಒಳಗೆ ಆ ಸ್ತ್ರೀ ಕಾಣಲಿಲ್ಲ ಜಟಾಧಾರಿಯಾಗಿ ಹೊರಹೊಮ್ಮುವ ತಪಶ್ಯಕ್ತಿಯಿಂದ ಹೊಳೆಯುವ ಮುಖವುಳ್ಳ ಒಬ್ಬ ಮುದುಕ ಕಂಡನು. ಸಂನ್ಯಾಸಿ ಬೆದರಿದನು ಆಗ ಆ ಮುದುಕನ ಕಾಲಿಗೆ ಬಿದ್ದು "ನಾನು ಅಜ್ಞ, ಕ್ಷಮಿಸಬೇಕು"೨೨ ಎಂದು ಬೇಡಿಕೊಂಡನು.

ಮೂಲಕತೆಯಲ್ಲಿ ಸಂನ್ಯಾಸಿ ಹೆಣ್ಣನ್ನು ಬಯಸುತ್ತಾನೆ ಮಾಸ್ತಿಯವರ ಕತೆಯಲ್ಲಿ ಆಕೆಯನ್ನು ನೋಡಲು ಮಾತ್ರ ಆಸೆ ಪಡುತ್ತಾನೆ. ಸಂನ್ಯಾಸಿಯನ್ನು ಇಲ್ಲಿ ತಿದ್ದುವುದು ಹೆಣ್ಣಲ್ಲ. ಅವನಿಗೆ ಹಿರಿಯರಾದ ವ್ಯಾಸ ಮತ್ತು ಗುರುಗಳು ಕತೆಯನ್ನು ಈ ರಈತಿ ನಿರ್ವಹಿಸಿರುವುದರಿಂದ ಸಂನ್ಯಾಸಿಯಲ್ಲಿ ಕೀಳರಿಮೆ ಅಥವಾ ಪಾಪಪ್ರಜ್ಞೆ ಉಳಿಯುವುದಿಲ್ಲ. ಸಂನ್ಯಾಸಿ ಬದುಕಿನಲ್ಲಿ ಕಲಿತ ಒಂದು ಪಾಠವಾಗಿ ಮಾತ್ರ ಕಾಣುತ್ತದೆ.

ಮತ್ತೊಂದು ಮಾಸ್ತಿಯವರ ಕಥೆ "ಹೇಮಕೂಟದಿಂದ ಬಂದ ಮೇಲೆ" ಎಂಬ ಕತೆಯಲ್ಲಿ ಕಾಳಿದಾಸನ ನಾಟಕ ಶಾಕುಂತಲೆ ಮತ್ತು ದುಷ್ಯಂತರ ಪುನಃ ಸಮಾಗಮದಲ್ಲಿ ಮುಗಿಯುತ್ತದೆ. ಆಕೆ ಮತ್ತೆ ಹೇಮಕೂಟದ ತನ್ನ ಸಾಕು ತಂದೆಯ ಆಶ್ರಮಕ್ಕೆ ಬಂದ ಸಂದರ್ಭವನ್ನು ಈ ಕತೆ ತಿಳಿಸುತ್ತದೆ. "ಶಾಕುಂತಲ ನಾಟಕವನ್ನು ಓದಿದವರಿಗೆ ಶಕುಂತಲ ಕಷ್ಟಕ್ಕೆ ಸಿಕ್ಕಿದ್ದನ್ನು ಕಂಡ ಆಕೆಯ ಗೆಳತಿಯರು ಅವಳ ಕಷ್ಟವನ್ನು ದಾಟಿ ರಾಣಿಯಾಗಿ ಸುಖವಾಗಿ ಕಂಡ ದಿನದಲ್ಲಿ ಅವಳನ್ನು ನೋಡಿ ಸಮಾಧಾನ ಪಡಲಿ ಎನಿಸುವುದು ಸಹಜ. ನನಗೆ ಹೀಗನ್ನಿಸಿದಾಗ ಮನಸ್ಸು ಕಟ್ಟಿದ ಚಿತ್ರ" ಈ 'ಹೇಮಕೂಟದಿಂದ ಬಂದ ಮೇಲೆ' ಕತೆ ಎಂದು ಮಾಸ್ತಿಯವರು ಹೇಳಿದ್ದಾರೆ.೨೩

ಕಾಳಿದಾಸನ ನಾಟಕದಲ್ಲಿ ಶಕುಂತಲೆಯ ಬಾಳಿನಲ್ಲಿ ನಡೆಯುವ ಘಟನೆಗಳು ಶಕುಂತಲೆ ಮತ್ತು ದುಷ್ಯಂತನ ಮೇಲೆ ಮೂಡಿದಷ್ಟು

---

ಅಡಿ ಟಿಪ್ಪಣಿ:೨೨. ಮಾಸ್ತಿಯವರ ಸಮಗ್ರ ಕಥೆ. ಸಂಪುಟ.೦೧.ಮಾವಿನಕೆರೆ ರಂಗನಾಥ್. ಪುಟ-೫೮
ಅಡಿ ಟಿಪಣಿ:೨೩. ಮಾಸ್ತಿ, 'ಸಾಹಿತ್ಯ ಪ್ರೇರಣೆ' ಪುಟ-೪೫

ಪರಿಣಾಮವನ್ನು ಇತರ ಪಾತ್ರಗಳ ಮೇಲೆ ಮಾಡಿರುವುದಿಲ್ಲ. ಉಳಿದ ಪಾತ್ರಗಳು-ದುಷ್ಯಂತ-ಶಕುಂತಲೆಯೊಂದಿಗೆ ಹೊಂದಿರುವ ಮಾನವೀಯ ಸಂಬಂಧದಿಂದ ಮಾತ್ರ ಶಕುಂತಲೆಯ ಕಷ್ಟದ ಜೀವನ ಅನುಕಂಪೆಗೆ ಒಳಗಾಗುತ್ತದೆ. ಆದುದರಿಂದ ಕತೆಯಲ್ಲಿ ಕಾಳಿದಾಸನ ನಾಟಕ ಮುಗಿದ ನಂತರದ ಕಲ್ಪನೆಯನ್ನು ದುಷ್ಯಂತ ಮತ್ತು ಶಕುಂತಲೆಯ ಪಾತ್ರಗಳಲ್ಲಿ ಮಾತ್ರ ತೀವ್ರವಾದ ಬದಲಾವಣೆ ಕಾಣುತ್ತೇವೆ. ಈ ಕತೆ ಶಕುಂತಲೆಯ ಮನಸ್ಸಿನ ಭಾವನೆಗಳನ್ನು ಕದಕುವುದರಲ್ಲಿ ಯಶಸ್ವಿಯಾಗುತ್ತದೆ. ಕಷ್ಟ ಅನುಭವಿಸಿದ ಜೀವ ಪಕ್ವವಾದ ಜೀವನ ದೃಷ್ಠಿ ಪಡೆದರೂ ಹಲವು ಅನುಭವಗಳನ್ನು ಅದು ಕಳೆದುಕೊಳ್ಳಬೇಕಾಗಿರುವುದನ್ನು ಕತೆ ಹೇಳುತ್ತಿದೆ ಎನಿಸುತ್ತದೆ. ಒಟ್ಟಾರೆ ಮಾಸ್ತಿಯವರ ಕತೆಯಲ್ಲಿ ಶಕುಂತಲೆಯ ಪಾತ್ರವನ್ನು ಇದೇ ದೃಷ್ಠಿಯಿಂದ ನೋಡಿರುವುದನ್ನು ಕಾಣಬಹುದು.

ಮುಂದುವರೆದಂತೆ '<u>ಗೌತಮಿ ಹೇಳಿದ ಕತೆ</u>' ಎಂಬ ಪೌರಾಣಿಕ ಕತೆಯಲ್ಲಿ ಗಂಡು ಹೆಣ್ಣಿನ ಸಂಬಂಧದ ಮತ್ತೊಂದು ಮುಖ ಕಾಣುತ್ತೇವೆ. 'ಹೇಮ ಕುಮುಟದಿಂದ ಬಂದ ಮೇಲೆ' ಕತೆಯಲ್ಲಿ ಗೌತಮಿ ಅನುಸೂಯೆ, ಪ್ರಿಯಂವದೆಯರಿಗೆ ಮದುವೆ ಮಾಡಿಬಿಡಬೇಕೆಂದು ಹಠ ಹಿಡಿದಳು ಎಂಬ ಮಾತು ಬರುತ್ತದೆ. ಅದನ್ನು ಕುರಿತು ಗೌತಮಿ ಒಂದು ಕತೆ ಹೇಳುತ್ತಾಳೆ. ಅದೇ ಗೌತಮಿ ಹೇಳಿದ ಕಥೆ.**೨೪** ಈ ಕತೆಯಲ್ಲಿ ಗೌತಮಿ, ಮಾಲಿನಿ ಎಂಬ ಹುಡುಗಿಯ ಕತೆಯೆಂದು ಹೇಳುವುದು ತನ್ನ ಕತೆಯನ್ನೇ ಆದರೆ ಈ ಸಂಗತಿ ಸೂಚ್ಯವಾಗಿ ಗೊತ್ತಾಗುವುದು ಕತೆಯ ಅಂತ್ಯದಲ್ಲಿ. ಆಕೆ ಕಣ್ವಾಶ್ರಮದಲ್ಲಿ ಭಾರದ್ವಜನನ್ನು ಮದುವೆಯಾಗಬೇಕಿದ್ದವಳು ಆಶ್ರಮದ ಮಹರ್ಷಿಗಳೂ ಭಾರದ್ವಜನಿಗೆ ಮಾಲಿನಿಯನ್ನು ಮದುವೆಯಾಗುವಂತೆ ಹೇಳುತ್ತಾರೆ. ಆದರೆ ಹೊಳೆಯಲ್ಲಿ ಈಜಲು ಹೋದ ಭಾರದ್ವಜ ಆಕಸ್ಮಿಕವಾಗಿ ಸಾಯುತ್ತಾನೆ. ಮಾಲಿನಿ ಒಂಟಿಯಾಗುತ್ತಾಳೆ. ಭಾರದ್ವಜನ ನೆನಪು ಮಾಸಿದಂತೆ ಮಾಲಿನಿ ದತ್ತನನ್ನು ತನ್ನನ್ನು ಮದುವೆಯಾಗುವಂತೆ ಕೇಳುತ್ತಾಳೆ. ಮಾಲಿನಿ ಆತ ಮದುವೆಗೆ ಒಪ್ಪದಿದ್ದಾಗ ದೈಹಿಕ ಸಂಬಂಧವನ್ನು ದತ್ತನಿಂದ ಬಯಸುತ್ತಾಳೆ. ಆದರೆ ಈ

ಅಡಿ ಟಿಪ್ಪಣಿ:೨೪. ನೋಡಿ, ಮಾಸ್ತಿ, "ಸಾಹಿತ್ಯ ಪ್ರೇರಣೆ". ಪುಟ-೫೭

ಅನೈತಿಕ ಸಂಬಂಧವನ್ನು ದತ್ತ ಒಪ್ಪುವುದಿಲ್ಲ. ಬದಲಿಗೆ ಆಕೆಯನ್ನು ಒಳ್ಳೆಯ ರೀತಿಯಲ್ಲಿ ಪರಿವರ್ತಿಸುತ್ತಾನೆ. ಮಾಲಿನಿಯನ್ನು ತಾನು ನಂಬಿದ ಮೌಲ್ಯದ ಹಾದಿಯಲ್ಲಿ ನಡೆಯುವಂತೆ ಪರಿವರ್ತಿಸುವುದರಲ್ಲಿ ಯಶಸ್ವಿಯಾಗುತ್ತಾನೆ. ಆದರೆ ಆಸೆ ಮತ್ತು ವಿಧಿ ಇವುಗಳ ಬಗೆಗೆ ಮಾಲಿನಿ ಎತ್ತುವ ಪ್ರಶ್ನೆಗೆ ಕತೆಯಲ್ಲಿ ದತ್ತ ಸಮರ್ಪಕವಾದ ಉತ್ತರ ನೀಡದಂತೆ ಕಾಣುವುದಿಲ್ಲ. ದತ್ತನ ಎದುರು ಮಾಲಿನಿ ನಿಂತಾಗ ದತ್ತನ ಮಾತುಗಳು ಅವಳಿಗೆ ಹುಸಿಯಾಗಿ ಕಾಣುತ್ತವೆ. ಆದರೂ ದತ್ತನ ಈ ವ್ಯಕ್ತಿತ್ವವನ್ನು ರೂಪಿಸಿರುವುದು ಅಲ್ಲಿನ ಮೌಲ್ಯವೇ ಆಗಿರುವುದರಿಂದ ಕತೆಯಲ್ಲಲಿ ಪ್ರವೃತ್ತಿಯ ಎದುರು ಮೌಲ್ಯ ಗೆಲ್ಲುತ್ತದೆ.

'ಮಂತ್ರೋದಯ' ಉಪನಿಷತ್ತಿನ ಉದಯವನ್ನು ಹೇಳುವ ಕತೆ ಇದು ಮಾಸ್ತಿಯವರ ಕಲ್ಪನೆಯ ರಚನೆ. ಈಶೋಪನಿಷತ್ತಿನಲ್ಲಿ ಬರುವ ಸೂತ್ರಗಳು ಬದುಕಿನ ನೆಲೆಗಟ್ಟಿನಿಂದ ಹೊಮ್ಮಿದವು ಎನ್ನುವುದನ್ನು ಕತೆ ತಿಳಿಸುತ್ತದೆ. ಈ ಕತೆಯಲ್ಲಿ ಮುಖ್ಯ ಪಾತ್ರವಾದ ಮಹರ್ಷಿ ವಾಮದೇವ ದ್ವೈಪಾಯನ ಅರುಣೇಯನಿಗೆ ಆತನ ಗುರುಗಳು 'ಲೋಕದ ಕರ್ಮವನ್ನು ಮಾಡಿಕೊಂಡು ನೂರು ವರ್ಷ ಬಾಳು' ಎಂದಿದ್ದಾರೆ. ಅದರಂತೆ ಅರುಣಿಯ ನೂರು ವರ್ಷ ಬಾಳುತ್ತಾನೆ. ಇಲ್ಲಿನ 'ನೂರು ವರ್ಷ' ಎಂಬ ಮಾತು ಒಂದು ತುಂಬು ಬಾಳನ್ನು ಸೂಚಿಸುತ್ತದೆ. ಮಹರ್ಷಿ ಕರ್ಮದ ಬಗೆಗೆ ಒತ್ತು ನೀಡುತ್ತಾನೆ. ಕರ್ಮದ ವಿವರಗಳನ್ನು ಆತ ಮಾಡಿ ತೋರಿಸುತ್ತಾನೆ. ಕೆಲಸಗಾರರಿದ್ದಾಗಲೂ ಆತ ತೋಟದ ಕೆಲಸ ಮಾಡುತ್ತಾನೆ ಕತೆಯಲ್ಲಿ ಬರುವ ವನದ ಚಿತ್ರಣ, ಮಹರ್ಷಿಗೂ ಆ ವನಕ್ಕೂ ಇರುವ ಸಂಬಂಧವನ್ನು ಕುರಿತ ವಿವರಗಳು ಮಹರ್ಷಿಯ ಕರ್ಮ ತತ್ವಕ್ಕೆ ಪ್ರತಿಮೆಯಾಗಿ ದುಡಿಯುತ್ತಾನೆ.

'ಹಿರಿಯರ ಅನುಷ್ಠಾನ' ಕ್ಕೆ ಒತ್ತು ನೀಡುವ ಮಹರ್ಷಿ ಎಲ್ಲವನ್ನೂ ನೂರು ವರ್ಷಗಳಷ್ಟು ಕಾಲ ಕ್ರಿಯೆಯಲ್ಲಿ ಮಾಡಿ ತೋರಿಸಿರುತ್ತಾನೆ. ಇದರಿಂದಾಗಿ ಆತನ ಕ್ರಿಯೆ ಉಪನಿಷತ್ತಾಗುತ್ತದೆ. ಎಲ್ಲವನ್ನೂ ಕ್ರಿಯೆಯಲ್ಲೂ ತೋರಿಸಿರುವುದರಿಂದ ತಾನು ಉಪದೇಶ ಮಾಡಬೇಕೆನ್ನುವುದನ್ನು ನಿರಾಕರಿಸುತ್ತಾನೆ. ಆದರೆ ಕೆಲವರ ಬಲವಂತಕ್ಕೆ ಮಾತುಗಳನ್ನು ಹೇಳುತ್ತಾನೆ ಇದೇ ಉಪನಿಷತ್ತಾಗುತ್ತದೆ.

ಈ ಮೇಲಿನ ಎಲ್ಲಾ ಕತೆಗಳನ್ನು ನೋಡಿದ ಸಂದರ್ಭದಲ್ಲಿ ಮಾಸ್ತಿಯವರ ಕಾಲ್ಪನಿಕ ಶಕ್ತಿ ಹೆಚ್ಚು ಶಕ್ತಿಯುತವಾದದ್ದಾಗಿದೆ ಎಂದು ತಿಳಿಯುತ್ತದೆ. ಒಟ್ಟಾರೆ ಅವರ ಈ ಮೂರು ವಿಧದ ಕತೆಯ ವಸ್ತುಗಳನ್ನು ನಾನು ಇಲ್ಲಿ ಪ್ರಾತಿನಿಧಿಕವಾಗಿ ವಿಶ್ಲೇಷಿಸಲು ಪ್ರಯತ್ನಿಸಿದ್ದೇನೆ.

# ಅಧ್ಯಾಯ-೦೪
# ಮಾಸ್ತಿಯವರ ಕಥೆಗಳಲ್ಲಿನ ಪಾತ್ರ ವಿಶ್ಲೇಷಣೆ

ಮಾಸ್ತಿಯವರು ಬರೆದದ್ದು ಸುಮಾರು ನೂರು ಕತೆಗಳು ಅವುಗಳಲ್ಲಿ ಸಾಮಾಜಿಕ ೪೯ ಕತೆಗಳು, ಐತಿಹಾಸಿಕವಾಗಿ ೩೭ ಕತೆಗಳನ್ನು ಬರೆದರೆ ಪೌರಾಣಿಕವಾಗಿ ೮ ಕತೆಗಳನ್ನು ಹಾಗೂ ಇತರೆ ೬ ಕತೆಗಳನ್ನು ರಚಿಸಿದ್ದಾರೆ.

ಪಾತ್ರ ವೈವಿಧ್ಯತೆಯಲ್ಲಿ ಶ್ರೀನಿವಾಸರದು ಎತ್ತಿದ ಕೈ, ನುರಿತ ಶೈಲಿ. ಎಲ್ಲರು ಜೀವಂತ ವ್ಯಕ್ತಿಗಳಾಗಿ ಇಂದು ನಮ್ಮ ಕಣ್ಣ ಮುಂದೆ ನಿತ್ಯ ಸುಳಿದಾಡುವ ಜನರಾಗಿದ್ದಾರೆ. ನಾವು ನಮ್ಮನ್ನು ಮರೆತು ಅವರ ಬಾಳು ಏಳು ಬೀಳುಗಳಲ್ಲಿ ಸಮಭಾಗಿಗಳಾಗುತ್ತೇವೆ. ಅವರಂತೆ ನಗುತ್ತೇವೆ, ನಲಿಯುತ್ತೇವೆ, ಅಳುತ್ತೇವೆ' ಇಲ್ಲಿ ಬರುವ ಪ್ರತಿಯೊಬ್ಬ ವ್ಯಕ್ತಿಯು ವಿಶಿಷ್ಟಗುಣ ಸ್ವಭಾವ ಸಂಪನ್ನವಾಗಿ ಪ್ರತ್ರ್ಯೇಕವಾಗಿ ನಿಲ್ಲುತ್ತಾನೆ. ಮಕ್ಕಳು ಸಹ ಗುರುತಿಸುವಷ್ಟು ಸುಸ್ಪಷ್ಟ. ಅವರ ವ್ಯಕ್ತಿತ್ವ ಐತಿಹಾಸಿಕ ವ್ಯಕ್ತಿಗಳಿಗೂ ಕಲ್ಪನಾ ವ್ಯಕ್ತಿಗಳಿಗೂ ವ್ಯತ್ಯಾಸ ಕಾಣುವಂತೆಯೂ ಇಲ್ಲ ಎನ್ನುವಂತೆ ರೂಪಿತವಾಗಿದೆ. ಮಾಸ್ತಿಯವರ ಲಕ್ಷ್ಯ ಯಾವಾಗಲೂ ಮನುಷ್ಯನ ನಡವಳಿಕೆಯ ಇತಿಮಿತಿಗಳ ಕಡೆಗೆ ಊರ್ಧ್ವಗಮನ ಮತ್ತು ಅದೋಗತಿಗಳ ವಿಚಿತ್ರದ ಕಡೆಗೆ ನೆಟ್ಟಿರುವುದರಿಂದ ಅವರ ಬರವಣಿಗೆಗಳಲ್ಲಿ ಅಂತಃಸತ್ವವನ್ನು ಕಾಣಬಹುದೇ ಹೊರತು ಹೊರಗಿನ ಆವರಣವನ್ನು ಕಾಣಲಾಗುವುದಿಲ್ಲ ಎನ್ನಬಹುದು.

ಈ ಪ್ರಸ್ತುತ ಅಧ್ಯಾಯದಲ್ಲಿಯೂ ನಾನು ಮಾಸ್ತಿಯವರ ಪ್ರಮುಖ ಕತೆಗಳಲ್ಲಿ ಕಂಡುಬರುವ ಪಾತ್ರಗಳ ವೈವಿಧ್ಯತೆಯನ್ನು ನನ್ನ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿಕೊಂಡಿದ್ದೇನೆ. ಅಂದರೆ ಪ್ರಮುಖವಾಗಿ ಸಾಮಾಜಿಕ ಐತಿಹಾಸಿಕ, ಪೌರಾಣಿಕ ಕಥೆಗಳಲ್ಲಿ ಒಡಮೂಡಿರುಪಾತ್ರಗಳ ವಿಶಿಷ್ಟತೆಯನ್ನು ವಿವರಿಸುವ ಕೆಲಸ ಮಾಡಿದ್ದೇನೆ.

**೪.೧ ಸಾಮಾಜಿಕ ಪಾತ್ರಗಳು :**

ಮಾಸ್ತಿಯವರ ಪಾತ್ರಗಳ ರಚನೆಯಲ್ಲಿ ತಮ್ಮ ಅನುಭವದ ವಿಚಾರಗಳನ್ನು ಇತಿಹಾಸದೊಂದಿಗೆ ಇಟ್ಟು ನೋಡುವ ಪ್ರಯತ್ನ ಮಾಡಿದ್ದಾರೆ ಎನ್ನಬಹುದು. ವಿವಿಧ ವರ್ಗಗಳ, ವಿವಿಧ ವೃತ್ತಿಗಳ ಹಾಗೂ ವಿವಿಧ ಮನೋಭಾವಗಳ ಜನರನ್ನು

ಚಿತ್ರಿಸುತ್ತಾ ಅವುಗಳಿಗೆ ಕತೆಯಲ್ಲಿ ಎಲ್ಲೂ ಕುಂದು ಬಾರದಂತೆ ಅಂದರೆ ಅವುಗಳ ತೇಜೋವಧೆ ಮಾಡದೆ ಪಾತ್ರಗಳನ್ನು ಚಿತ್ರಿಸುತ್ತಾ ಹೋಗಿದ್ದಾರೆ. ಒಂದು ವೇಳೆ ಇವರು ಕೆಟ್ಟವರು, ಒಳ್ಳೆಯವರು ಎಂದು ಓದುಗರಾದ ನಾವು ನಿರ್ಧರಿಸಬೇಕೆ ಹೊರತು ಲೇಖಕರಲ್ಲ ಎನ್ನುವಂತೆ ಮಾಸ್ತಿಯವರ ಬರವಣಿಗೆ ಇದೆ.

ಮಾಸ್ತಿಯವರು ಬರೆದಿರುವಂತಹ ಕತೆಗಳಲ್ಲಿ ಸುಮಾರು ಕತೆಗಳು ಪುರಷ ನಾಮಾಂಕಿತದ ಶೀರ್ಷಿಕೆಯಿಂದ ಕೂಡಿರುವುದನ್ನು ಗಮನಿಸಬಹುದು. ಮಾಸ್ತಿಯವರು ತಮ್ಮ ಕತೆಗಳಲ್ಲಿ ಹಲವು ವೈರುದ್ಧ್ಯಗಳಿಂದ ಕೂಡಿರುವಂತಹ ಪುರುಷ ಪಾತ್ರಗಳನ್ನು ತಂದಿದ್ದಾರೆ. ಇವರಲ್ಲಿ ಒಳ್ಳೆಯವರು, ಕೆಟ್ಟವರು, ಕೆಲವುವೇಳೆ ಇವೆರಡೂ ಗುಂಪಿಗೂ ಸೇರದೆ ಓದುಗರ ಅನುಕಂಪ, ಕರುಣೆಗೆ ಪಾತ್ರರಾಗುವಂತಹವರು ಇದ್ದಾರೆ.

ಮಾಸ್ತಿಯವರ ಸಾಮಾಜಿಕ ಕತೆಗಳಲ್ಲಿ ತಂದಿರುವ ಪಾತ್ರಗಳನ್ನು ಈ ಮುಂದಿನಂತೆ ನೋಡಬಹುದು. ಮೊದಲಿಗೆ ಮಾಸ್ತಿಯವರ ಕತೆಯ ಆರಂಭದಲ್ಲಿ ಬರುವ ರಂಗಪ್ಪನ ಕತೆಗಳು ರಂಗನ ಪಾತ್ರವನ್ನು ವಿವಿಧ ಸಂದರ್ಭದಲ್ಲಿ ಕಾಣಬಹುದು ರಂಗನ ಮದುವೆಯಲ್ಲಿ ಬರುವ ನಾಯಕ 'ರಂಗಪ್ಪ' ತಾನು ಹುಟ್ಟಿ ಬೆಳೆದ ಸಮಾಜದ ರೀತಿನೀತಿಗಳಿಗೆ ವಿರೋಧವಾಗಿ ಯೋಚಿಸುತ್ತಾನೆ. ಮುಂದೆ ಅದೇ ರಂಗಪ್ಪ 'ರಂಗಪ್ಪ ದೀಪಾವಳಿ' ಕತೆಯಲ್ಲಿ 'ರಂಗನ ಮದುವೆಯ' ಮುಂದುವರಿಕೆಯಾಗಿದೆ ಮೊದಲ ಕತೆಯಲ್ಲಿ ವಯಸ್ಸಾದ ಹುಡುಗಿಯರನ್ನು ಮದುವೆಯಾಗದಿದ್ದರೆ ಪ್ರೇಮವಾಗಿ ಮಾತನಾಡಲು ಆಗುವುದಿಲ್ಲ ಎನ್ನುವ ಆಲೋಚನೆಯ ನಿರರ್ಥಕತೆಯನ್ನು ಈ ಕತೆಯಲ್ಲಿ ನಿರೂಪಿಸಿದೆ ಇದೆ ಕತೆಯಲ್ಲಿ ಮತ್ತೊಂದು ಪರೋಕ್ಷ ಪಾತ್ರ ಕಂಡು ಬರುತ್ತದೆ. ಅದೆಂದರೆ ರಂಗಪ್ಪನ ತಂಗಿಯಾದ 'ಅಮ್ಮಯ್ಯ'ಳ ಪಾತ್ರ ಈ ಕತೆಯಲ್ಲಿ ನಿರೂಪಕರು ರಂಗಪ್ಪನ ದೀಪಾವಳಿಗೆ ಹೋಗಲು ಅಸಾಧ್ಯವಾದುದರಿಂದ ಅಲ್ಲಿನ ಕತೆಯನ್ನು ನಿರೂಪಕರಿಗೆ ತಿಳಿಸಲು ಈ ಪಾತ್ರ ಸೃಜಿಸಲಾಗಿದೆ. ಜೊತೆಗೆ ಈ

ಕತೆಯಲ್ಲಿ ರಂಗನ ಹೆಂಡತಿಯಾಗಿ 'ರತ್ನಮ್ಮ' ಕಾಣಿಸಿಕೊಳ್ಳುತ್ತಾಳೆ. ಈಕೆ ಕತೆಯ ಅಂತ್ಯದಲ್ಲಿ ಆಡುವ ಮಾತುಗಳು ಈ ಕತೆಯಲ್ಲಿ ಮುಖ್ಯವಾಗುತ್ತದೆ. ಅದೆಂದರೆ "ಬೆಳಿಗ್ಗೆ ಬಂದವರು ನನ್ನ ಕೂಡ ಮಾತನಾಡುವುದಕ್ಕೆ ಈಗಲೇ ಬರುವುದು" ಎಂಬ ಮಾತು ರಂಗಪ್ಪನಿಗೆ ಚಿಕ್ಕ ಹುಡುಗಿಯಾದರೂ ರತ್ನಳು ಒಬ್ಬ ಭಾವನೆಯುಳ್ಳ ವ್ಯಕ್ತಿ ಎಂದು ಅರಿವಾಗುತ್ತದೆ. ಮುಂದೆ 'ರಂಗಪ್ಪನ ಕೋರ್ಟ್‌ಷಿಪ್' ನಲ್ಲಿ ಅದೇ ರಂಗಪ್ಪ ತನ್ನ ಹೆಂಡತಿಗೆ ಪ್ರೇಮಪತ್ರಗಳನ್ನು ಬರೆಯಲು ಕಲಿಸಿಕೊಡುವ ಪ್ರಯತ್ನದಲ್ಲಿ ವಿಫಲನಾಗುತ್ತಾನೆ. ಏನೇ ಆದರೂ ಈ ಮೂರು ಕತೆಯಲ್ಲಿ ಕೇಂದ್ರ ಪಾತ್ರವಾದ 'ರಂಗಪ್ಪ' ನ ಆಲೋಚನೆಗಳು ಅವನ ಸಂಸ್ಕೃತಿಗೆ ಒಗ್ಗದಿದ್ದರೂ ಅವನ ಬೆಳವಣಿಗೆಯನ್ನು ಸೂಚಿಸುತ್ತದೆ.

ಮೊದಲು ಕಥಾ ಸಂಕಲನದಲ್ಲೇ ಇರುವ 'ರಂಗಸ್ವಾಮಿಯ ಅವಿವೇಕ' ಎಂಬಕತೆಯನ್ನೂ ಅವರ ಮೊದಲ ಕತೆಗಳೊಂದಿಗೆ ನೋಡಬಹುದು. ಇಲ್ಲಿ 'ಅವಿವೇಕಿ'ತನದ 'ರಂಗಸ್ವಾಮಿ' ತಾನು ಓದಿದ ಚಾರಿತ್ರಿಕ ಕಾದಂಬರಿಗಳ ಕ್ಷತ್ರಿಯ ರಮಣೀಯರಿಗೂ ತನ್ನ ಸುತ್ತಮುತ್ತಲಿರುವ 'ರಮಣಿ' ಯರಿಗೂ ಇರುವ ವ್ಯತ್ಯಾಸ ತಿಳಿದುಕೊಳ್ಳದಿರುವುದೇ ಆಗಿದೆ. ಅಲ್ಲದೇ ರಂಗಸ್ವಾಮಿ ಸಂಗೀತ ಕಲಿತುಕೊಳ್ಳುವುದು, ಕೂದಲನ್ನು ಉದ್ದವಾಗಿ ಬೆಳಸಿಕೊಳ್ಳುವುದು, ಮೊದಲಾದ "ಅವಿವೇಕ" ಗಳೆಲ್ಲ ಅವನ ಮೂಲ ಅವಿವೇಕಕ್ಕೆ ಸಂಬಂಧಿಸಿದೆ. ಕೊನೆಗೆ ತನ್ನ ಅವಿವೇಕದಿಂದ ಇಂದಿರಾದೇವಿಯನ್ನು ಬಯಸಿ ತನ್ನ ತಪ್ಪಿನ ಅರಿವಾಗಿ ಪಶ್ಚಾತ್ತಾಪ ಪಡುತ್ತಾನೆ.

ಈ ಮುಂದೆ 'ವೆಂಕಟರಾಯನ ಪಿಶಾಚ' ಕತೆಯು ಹಾಸ್ಯ ಪ್ರಧಾನವಾಗಿದ್ದು ಮನುಷ್ಯನ ಮನಸ್ಸಿನ ಭ್ರಮೆಯನ್ನು ಹಾಸ್ಯದ ನೆಲೆಯಲ್ಲಿ ಕತೆಗಾರರು ತಿಳಿಸಿದ್ದಾರೆ. ಬೆಕ್ಕನ್ನು ಕಂಡು ಅದನ್ನು ದೆವ್ವ ಎಂದುಕೊಳ್ಳುವ 'ವೆಂಕಟರಾಯ' ಆ ಕಲ್ಪನೆಯಲ್ಲೇ ದೆವ್ವದ ವಿವಿಧ ನ್ಯಾಸಗಳನ್ನು ಕಾಣುತ್ತಾನೆ. ಈ ಕತೆಯಲ್ಲಿ ಬರುವ 'ಕೃಷ್ಣಪ್ಪ' ವೆಂಕಟರಾಯನ ಬಳಿ ಮಲಗಿದ್ದಾಗ ಕೃಷ್ಣಪ್ಪನವರ ತಲೆಯೂ ದೆವ್ವದಂತೆ ಕಂಡಾಗ

ಬಟ್ಟೆಯಲ್ಲಿ ಅವರಿಗೆ ಪೆಟ್ಟು ಕೊಡುತ್ತಾನೆ. ಅದರಂತೆಯೆ ಈ ಕತೆಯಲ್ಲಿ ಅಲ್ಲಲ್ಲಿ ಶ್ರೀನಿವಾಸರಾಯರ ಪಾತ್ರವನ್ನು ಸಹ ಕಾಣಬಹುದು.

'ನಮ್ಮ ಮೇಷ್ಟ್ರು' ಎಂಬ ಕತೆಯಲ್ಲಿ ಮೇಷ್ಟ್ರ ಪಾತ್ರವನ್ನು 'ವೆಂಕಟರಾಯರು' ವಹಿಸುತ್ತಾರೆ. ಮತ್ತು ಮೇಷ್ಟರ ಪರಿಚಯ ಮಾಡಿಕೊಳ್ಳಬೇಕಾದರೆ ಅನಾಮೇದಯಳಾಗಿರುವ ಮೇಷ್ಟರ ಹೆಂಡತಿಯಿಂದ ತಿಳಿದುಕೊಳ್ಳಬಹುದು. ಕತೆಯಲ್ಲೆ ಲಕ್ಷ್ಮಿ, ಸರಸ್ವತಿ ಎಂಬ ವಿದ್ಯಾರ್ಥಿನಿಯರ ಪಾತ್ರವು ಸಹ ಅಲ್ಲಲ್ಲಿ ಗೋಚರವಾಗುತ್ತದೆ. 'ಬೀದಿಯಲ್ಲಿ ಹೋಗುವ ನಾರಿ' ಕತೆಯಲ್ಲಿ ಪ್ರಮುಖ ಪಾತ್ರವಾಗಿ 'ಶ್ರೀನಿವಾಸಯ್ಯ' ಕಾಣಿಸಿಕೊಳ್ಳುತ್ತಾರೆ. ಈತ ಮುಗ್ಧ ವ್ಯಕ್ತಿಯಾದರೂ ಸಮಾಜ ಅವನನ್ನು ನೋಡುವ ದೃಷ್ಟಿ ಹಾಗೂ ಅವನಿಗಾಗುವ ಅನುಭವ ಇಲ್ಲ ತಿಳಿಯಬಹುದು. ಅವನ ಮುಗ್ಧತೆಯಿಂದಾಗಿ ಸಮಾಜದಲ್ಲಿ ನಡೆಯುತ್ತಿರುವ ಅನ್ಯಾಯದ ಅರಿವಾಗುವುದಿಲ್ಲ. ರೈಲ್ವೆ ಸ್ಟೇಷನ್ನಿನಲ್ಲಿರುವ ನಾರಿ ವೇಶ್ಯೆ ಎಂದು ಇತರರಿಗೆ ತಿಳಿದರೂ ಈತನಿಗೆ ತಿಳಿಯುವುದಿಲ್ಲ. ಈ ಮುಗ್ಧತೆಯಿಂದ ಅವನಲ್ಲಿ ಕಾಣುವ 'ಸಂನ್ಯಾಸತ್ವದ' ಬಗೆಗೆ ಸಮಾಜದ ಇತರರು ತಾತ್ಸಾರದಿಂದ ನೋಡುತ್ತಾರೆ. ಈ ಕತೆಯ ಶ್ರೀನಿವಾಸಯ್ಯ ಆ ವೇಶ್ಯೆಯನ್ನು ನೀನು ನನ್ನ ತಂಗಿ, ನಿನ್ನಲ್ಲಿ ಮರ್ಯಾದೆಯೇ? ಎಂದು ಹೊರಟುಹೋಗುತ್ತಾನೆ. ಈ ಕತೆಯಲ್ಲಿ ಕತೆಗಾರರ ಕೌಶಲ್ಯದಿಂದ ನಮಗೆ ಶ್ರೀನಿವಾಸಯ್ಯನಾಗಲಿ, ವೇಶ್ಯೆಯಾಗಲಿ ತಿರಸ್ಕಾರಕ್ಕೆ ಒಳಗಾಗುವುದಿಲ್ಲ.

'ನಾರಾಯಣ ಮೂರ್ತಿ' ಎಂಬ ಪಾತ್ರವು 'ಇಂದಿರೆಯೋ ? ಅಲ್ಲವೋ' ಎಂಬ ಕತೆಯಲ್ಲಿ ಕೇಂದ್ರ ವ್ಯಕ್ತಿಯಾಗಿ ಕಾಣಿಸಿಕೊಳ್ಳುತ್ತಾನೆ. ಈತ ತನ್ನ ಮೊದಲ ಹೆಂಡತಿಯ ಚಿಕ್ಕವಯಸ್ಸಿನ ಮಗುವನ್ನು ನೋಡಿಕೊಳ್ಳಲು ಎರಡನೇ ಮದುವೆಯಾಗುತ್ತಾನೆ. ಆತನ ಎರಡನೇ ಹೆಂಡತಿಯೇ 'ಸಾವಿತ್ರಿ' ಈಕೆ ತನಗೆ ಮಕ್ಕಳಾದಾಗ ಮಲ ಮಗನನ್ನು ತಿರಸ್ಕರಿಸುತ್ತಾಳೆ' ಈ ಕೆಥೆಯಲ್ಲಿ ನಾರಾಯಣ ಮೂರ್ತಿಯ ಮೊದಲನೇ ಹೆಂಡತಿಯ ಜೀವನವನ್ನು ಈ ಕತೆಯಲ್ಲಿ ಕನಸಿನ ರೂಪವಾಗಿ ತರಲಾಗಿದೆ.

'ಮಂಗಮ್ಮ' ಎಂಬ ಪಾತ್ರವು ಸಾಮಾಜಿಕ ಹಾಗೂ ಕೌಟುಂಬಿಕ ಸಮಸ್ಯೆಯನ್ನು ಒಳಗೊಂಡಂತೆ 'ಮೊಸರಿನ ಮಂಗಮ್ಮ' ಕತೆಯ ನಾಯಕಿಯ ಪಾತ್ರವಾಗಿದೆ. ಈ ಕತೆಯ ಮೊದಲ ವಿವರದಲ್ಲಿ ಮಂಗಳಮ್ಮಳ ಕುಟುಂಬದಲ್ಲಿ ಹುಟ್ಟುವ ಸಮಸ್ಯೆ ಸೂಚಿತ ಆಗಿದೆ. ತನ್ನನ್ನು ಅನುಸರಿಸಿ ನಡೆಯುತ್ತಿದ್ದ ಮಗ ಅವನ ಹೆಂಡತಿ ಬಂದಾಗ ಅವಳನ್ನು ಅನುಸರಿಸುವುದನ್ನು ಕುರಿತು ಮಂಗಳಮ್ಮಳಿಗೆ ನೋವು ಉಂಟಾಗಿದೆ.

ನಂತರ ಸೊಸೆಯಿಂದ ದೂರವಾಗಿ ಬೇರೆ ಇರಲು ನಿರ್ಧರಿಸಿ ಇದುವರೆಗೆ ಮಂಗಮ್ಮಳಿಗೆ ಕುಟುಂಬದಿಂದಷ್ಟೆ ಸಮಸ್ಯೆ ಹುಟ್ಟಿದರೆ ಮುಂದಿನ ಹಂತದಲ್ಲಿ ಅವಳು ಸಮಾಜದ ವಿಷಯವಾಗಿಯೂ ಸಮಸ್ಯೆ ಎದುರಿಸುತ್ತಾಳೆ ಕೊನೆಗೆ ಹಲವಾರು ನೋವನ್ನು ಅನುಭವಿಸಿದನಂತರ ಸೊಸೆಯೇ ಬಂದು ತಮ್ಮೊಂದಿಗಿರುವಂತೆ ಕೇಳಿದಾಗ ತನ್ನ ದೊಡ್ಡಸ್ಥಿಕೆ ನಿಂತಂತಾಗಿ ಮಗ ಸೊಸೆಯರೊಂದಿಗೆ ಸೇರುತ್ತಾಳೆ.



'ವೆಂಕಟಿಗ' (ವೆಂಕಟರಮಣ) ಈ ಪಾತ್ರವು 'ವೆಂಕಟಿಗನ ಹೆಂಡತಿ' ಕತೆಯಲ್ಲಿ ಬರುವ ಕೆಳವರ್ಗದಿಂದ ಬಂದ ಒಬ್ಬ ವ್ಯಕ್ತಿಯ ಹೆಸರಾಗಿದೆ. ಈತ ತನ್ನ ಸಂಬಂಧಿಕಳಾದ, ಚಿಕ್ಕಂದಿನಿಂದ ತನ್ನೊಂದಿಗೆ ಒಡನಾಡಿನ ಹೆಣ್ಣನ್ನು ಮದುವೆಯಾಗುತ್ತಾನೆ. ಆಕೆ ಸಾಹುಕಾರನೊಬ್ಬನ ಶ್ರೀಮಂತಿಕೆಗೆ ಮರುಳಾಗಿ ಆತನನ್ನು ಸೇರುತ್ತಾಳೆ. ವೆಂಕಟಿಗ ಸಾಹುಕಾರನನ್ನು ತನ್ನ ಹೆಂಡತಿಯನ್ನು ಹಿಂದಕ್ಕೆ ಕಳುಹಿಸುವಂತೆ ಕೇಳುತ್ತಾನೆ, ಸಾಹುಕಾರ ಒಪ್ಪುವುದಿಲ್ಲ. ಕೊನೆಗೆ ಹಲವುದಿನಗಳ ನಂತರ ಸಾಹುಕಾರನ ದುಷ್ಟಗುಣದ ಪರಿಚಯವಾದಂತೆ ವೆಂಕಟಿಗನ ಹೆಂಡತಿ ಅವನನ್ನು ತ್ಯಜಿಸಿ ಗಂಡನಲ್ಲಿಗೆ ಬರುತ್ತಾಳೆ. ಆಕೆಯನ್ನು ವೆಂಕಟಿಗ ಕರೆದು ಕೊಳ್ಳುತ್ತಾನೆ. ಹೆಂಡತಿ ನೀತಿ ತಪ್ಪಿದರೂ ವೆಂಕಟಿಗ ಭಾವನೆಗೆ ಬೆಲೆ ಕೊಡುವುದರಿಂದ ಕತೆ ಸುಖಾಂತಗೊಳಿಸುತ್ತಾನೆ.

'ವಿಶ್ವನಾಥ' ಎಂಬ ಪಾತ್ರವು 'ನಳಿನಿಯ ತಂದೆ' ಕತೆಯಲ್ಲಿ ಕಾಣಬಹುದು ಈತ ಶ್ರೀಮಂತರ ಅಳಿಯನಾಗಿ ದೂರದ ಊರಿನಲ್ಲಿದ್ದು ಕೆಟ್ಟ ಚಾಳಿಗೆ

ಬೀಳುತ್ತಾನೆ. ವೇಶ್ಯೆಯರ ಸಹವಾಸ ಕಲಿತ ವಿಶ್ವನಾಥ ತನ್ನ ಮನೆಯಲ್ಲೇ ಕಳುವು ಮಾಡಿದಾಗ ಪತ್ನಿಯಿಂದ ದೂರ ಆಗುತ್ತಾನೆ. ಹಲವು ವರ್ಷಗಳ ನಂತರ ಹೆಂಡತಿಯನ್ನು ಭೇಟಿಮಾಡಿ ಮತ್ತೆ ಸಂಸಾರ ಹೂಡುವ ಬಯಕೆ ವ್ಯಕ್ತಪಡಿಸಿದಾಗ ಆ ಹೊತ್ತಿಗೆ ವಿಶ್ವನಾಥನ ನಡವಳಿಕೆಯಿಂದ ಬೇಸತ್ತಿದ್ದ ಆಕೆ ನಿರಾಕರಿಸುತ್ತಾಳೆ, ಮತ್ತೆ ಇಬ್ಬರು ಬೇರೆ ಆಗುತ್ತಾರೆ.

'ಲಕ್ಷ್ಮೀ' ಎಂಬ ಪಾತ್ರವು ಸಹ ಈ ಮೇಲಿನ ಕತೆಯಲ್ಲಿ ವಿಶ್ವನಾಥನ ಹೆಂಡತಿಯಾಗಿ ಕಾಣಿಸಿಕೊಳ್ಳುತ್ತದೆ. ಈಕೆಗೆ ತನ್ನ ಗಂಡನ ಜೊತೆ ಸಂಸಾರ ಹೂಡುವ ಮೊದಲೇ ಅವನ ಕೆಟ್ಟ ಗುಣಗಳ ವಿಷಯ ತಿಳಿದಿದ್ದರಿಂದ ಜೀವನದಲ್ಲಿ ಆಸಕ್ತಿ ಕಳೆದುಕೊಳ್ಳುತ್ತಾಳೆ. ಗಂಡನನ್ನು ಆಕೆ ತಿದ್ದಲು ಪ್ರಯತ್ನಿಸುವುದಿಲ್ಲ. ತಂದೆ–ತಾಯಿಯರ ನಿರ್ಧಾರಕ್ಕೆ ವಿಧೇಯಳಾಗಿ, ಅವನೊಡನೆ ಸಂಸಾರ ಮಾಡಿ ಒಂದು ಮಗು ಪಡೆಯುತ್ತಾಳೆ. ಕೊನೆಗೆ ಅವನ ಕೆಟ್ಟಚಾಳಿಯಿಂದ ಬೇಸತ್ತಿದ್ದ ಆಕೆ ತನ್ನ ಮಗುವಿನ ಜೀವನದ ದೃಷ್ಟಿಯಿಂದ ಸ್ವತಂತ್ರ ಜೀವನ ನಡೆಸುವ ಸಲುವಾಗಿ ಮತ್ತೆ ಅವನನ್ನು ಸೇರಲು ಲಕ್ಷ್ಮಿ ನಿರಾಕರಿಸುತ್ತಾಳೆ.

'ಚೆನ್ನಮ್ಮ' ಎಂಬ ಸ್ತ್ರೀ ಪಾತ್ರವು 'ಚೆನ್ನಮ್ಮ' ಕತೆಯಲ್ಲಿ ಕೇಂದ್ರ ಪಾತ್ರವಾಗಿ ಕಾಣಿಸಿಕೊಳ್ಳುತ್ತದೆ. ಚೆನ್ನಮ್ಮ ಗಂಡನನ್ನು ಅನುಸರಿಸಬೇಕೆಂಬ ಸಂಪ್ರದಾಯ ಪದ್ಧತಿಗೆ ಅನುಗುಣವಾಗಿ ತನಗೆ ಇಷ್ಟವಿಲ್ಲದಿದ್ದರೂ ಗಂಡ ರಾಮಪ್ಪನ ಜೊತೆ ಪಟ್ಟಣಕ್ಕೆ ಬರುತ್ತಾಳೆ. ಅಲ್ಲಿ ಆಕೆ ಹಲವು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಹಣದ ಅವ್ಯವಹಾರದಲ್ಲಿ ತನ್ನ ಗಂಡ ಸಿಲುಕಿ ಅದಕ್ಕೆ ಚೆನ್ನಮ್ಮಳನ್ನು ಭಾಗಿಯನ್ನಾಗಿ ಮಾಡುತ್ತಾನೆ. ಕೊನೆಗೆ ಜೈಲಿನಿಂದ ಗಂಡ ವಾಪಸ್ಸು ಬಂದಾಗ ಮತ್ತೆ ಆಕೆಯನ್ನು ಸಂಸಾರ ಹೂಡಲು ಕರೆದಾಗ ನಿರಾಕರಿಸುತ್ತಾಳೆ ಕೊನೆಗೆ ಆತ ಸತ್ತ ಸುದ್ದಿ ತಿಳಿದಾಗಲೂ ಅವನನ್ನು ನೋಡಬೇಕೆಂದು ಆಕೆಗೆ ಅನ್ನಿಸುವುದಿಲ್ಲ.

'ನರಸಿಂಹಯ' ಈ ಪಾತ್ರವು ಗಂಡು ಮಾಡುವ ತಪ್ಪು ಹೆಣ್ಣಿಗೆ ನೋವುಂಟುಮಾಡುವ ಕತೆಯಾದ 'ಸಂನ್ಯಾಸ ಅಲ್ಲದ ಸಂನ್ಯಾಸ' ಎಂಬ ಕತೆಯ

ಕೇಂದ್ರಬಿಂದು ಆಗಿದೆ. ಇಲ್ಲಿ ನರಸಿಂಹಯ್ಯ ಬೆಂಡೆಕಾಯಿಯಿಂದ ಮಾಡುವ ಹುಳಿಯ ಆಸೆಗೆ ಅದನ್ನು ಮಾಡಲಿಲ್ಲಿ ಎಂಬ ಕಾರಣಕ್ಕೆ ಹೆಂಡತಿಯನ್ನು ಬಿಟ್ಟು ಸಂನ್ಯಾಸ ಸ್ವೀಕರಿಸುತ್ತಾನೆ. ಆತನ ದೌರ್ಬಲ್ಯದಿಂದ ಬರುವ ಕೋಪ, ಆ ಕೋಪದಿಂದಾಗಿ ಆತ ದುಡುಕುತ್ತಾನೆ. ಸಂನ್ಯಾಸ ಸ್ವೀಕರಿಸಿದ ನಂತರ ಸಂನ್ಯಾಸದ ಅರಿವು ನರಸಿಂಹಯ್ಯನವರಿಗಾಗುತ್ತದೆ. ಅದರ ಬಗೆಗೆ ಅವರಿಗೆ ಕಾಳಜಿ ಹುಟ್ಟುವುದಿಲ್ಲ. ಆ ನಂತರ ಸಂನ್ಯಾಸದ ಬಗ್ಗೆ ಬೇಸರ ಆಗಿ ಹೆಂಡತಿ ಬಂದಾಗ ಅವರು ಮತ್ತೆ ಸಂಸಾರಿಯಾಗುತ್ತಾರೆ.

ಹೀಗೆ ಮಾಸ್ತಿಯವರು ತಮ್ಮ ಕತೆಯುದ್ದಕ್ಕೂ ಎಲ್ಲ ಸಾಮಾಜಿಕ ಕತೆಗಳಲ್ಲಿ ಸನ್ನಿವೇಶ ಅಗತ್ಯಗಳಿಗೆ ತಕ್ಕಂತೆ ಸ್ತ್ರೀಯರನ್ನು ಕಡೆಗಣಿಸದೆ ಅವರನ್ನು ಹಿಯ್ಯಾಳಿಸದೆ ಪುರಷರ ಸಮಾನವಾಗಿ ಸ್ತ್ರೀಯರ ಪಾತ್ರವನ್ನು ಸೃಷ್ಟಿಸಿದ್ದಾರೆ.

**೪.೨ ಐತಿಹಾಸಿಕ ಪಾತ್ರಗಳು**

ಮಾಸ್ತಿಯವರ ಚಾರಿತ್ರಿಕ ಕತೆಗಳಿಗೆ ಬಂದಾಗ ತಮ್ಮ ಮೌಲ್ಯಗಳನ್ನು ಅರ್ಥಮಾಡಿಕೊಂಡು ಬದುಕುವ ಪಾತ್ರಗಳಿದ್ದಂತೆಯೆ ತಮ್ಮ ದುಷ್ಟಗುಣಗಳಿಂದಾಗಿ ಒಂದು ವ್ಯವಸ್ಥೆಯನ್ನು ಹಾಳು ಮಾಡುವ ಪಾತ್ರಗಳು ಇವೆ. ಈ ಪಾತ್ರಗಳು ಸಾಮಾಜಿಕ ಕತೆಗಳಿಗಿಂತ ಹೆಚ್ಚು ಸಂಖ್ಯೆಯಲ್ಲಿ ಕಾಣಬರುತ್ತದೆ. ಈ ಪಾತ್ರಗಳ ನಡವಳಿಕೆಗಳನ್ನು ಚಿತ್ರಿಸುವುದರ ಮೂಲಕ ಮಾಸ್ತಿಯವರು ಒಟ್ಟಿನಲ್ಲಿ ಮನುಷ್ಯ ಆತಯಾವುದೇ ದೇಶದವನಾಗಿರಬಹುದು, ಯಾವುದೇ ಕಾಲದವನಾಗಿರಬಹುದು ತನ್ನ ಬದುಕನ್ನು ತನ್ನ ಸಹಜೀವಿಗಳ ಬದುಕನ್ನು ಚೆನ್ನಮಾಡಿಕೊಳ್ಳಲು ಅನುಸರಿಸಬೇಕಾದ ಜೀವನ ಕ್ರಮದ ಶ್ರುತಿಯನ್ನು ಹಿಡಿಯುತ್ತಿದ್ದಾರೆಂಬುದು ಬೋಧೆಯಾಗುತ್ತದೆ.

ಮಾಸ್ತಿಯವರು ತಮ್ಮ ಕಥಾಸಾಹಿತ್ಯದಲ್ಲಿ ಸಾಮಾಜಿಕ ಕತೆಗಳಲ್ಲಿಯಂತೆ ಚಾರಿತ್ರಿಕ ವ್ಯಕ್ತಿಗಳನ್ನು ಸಹ ಆಶ್ರಯಿಸಿ ಇಂದಿಗೂ ಸಹ ಅನ್ವಯವಾಗುವ ರೀತಿಯಲ್ಲಿ ಐತಿಹಾಸಿಕ ಪಾತ್ರಗಳನ್ನು ಸೃಷ್ಟಿಸಿರುವುದನ್ನು ಈ ಕೆಳಕಂಡಂತೆ ನೋಡಬಹುದು.

'ಗಿರಿಜವ್ವೆ' ಎಂಬ ಪಾತ್ರವು ಪ್ರಮುಖ ವ್ಯಕ್ತಿಯಾಗಿ 'ನಿಜಗಲ್ಲಿನ ರಾಣಿ' ಎಂಬ ಕತೆಯಲ್ಲಿ ಕಾಣಿಸಿಕೊಳ್ಳುತ್ತದೆ. ಈ ಕತೆಯಲ್ಲಿ ಗಿರಿಜವ್ವೆಯ ವ್ಯಕ್ತಿತ್ವ ಕತೆಯ ಪ್ರಾರಂಭದಲ್ಲಿಯೇ ರೂಪಿತವಾಗಿದೆ. ಈ ಕತೆಯಲ್ಲಿ ರಾಮರಸನ ಎರಡನೇ ಹೆಂಡತಿಯಾಗಿ ಈಕೆ ಕಾಣಿಸಿಕೊಳ್ಳುತ್ತಾಳೆ' ತನ್ನ ಸವತಿಯಾದ ಲಕುಮವ್ವೆಯನ್ನು ಅರ್ಥ ಮಾಡಿಕೊಂಡು ಜೀವನ ಸಾಗಿಸುತ್ತಾಳೆ. ಆದರೆ ಗಿರಿಜವ್ವೆಯ ತಮ್ಮನಿಂದಾಗಿ ರಾಜ್ಯದಲ್ಲಿ ಸಣ್ಣಪುಟ್ಟ ಗಲಾಟೆಗಳಾಗುತ್ತವೆ. ಅವಳ ತಮ್ಮ 'ಕಸ್ತೂರಿ' ಹಳ್ಳಿಯಲ್ಲಿ ಪೋಲಿಯಾಗಿದ್ದವ ಅರಮನೆಗೆ ಬಂದ ಮೇಲೆ 'ಪುಂಡನಾಗುತ್ತಾನೆ'. ತಮ್ಮನ ದುಶ್ಕೃತ್ಯದಿಂದಾಗಿ ತನ್ನ ಗಂಡನಿಗೆ ಮಾಡಿಕ ಅನ್ಯಾಯ ಹೇಳಿ ಅವನು ಉಳಿಯಬಾರದೆಂದು ಕೋಟೆಯ ಮೇಲೆ ನಿಂತು ಕೊತ್ತಲದ ಕೆಳಕ್ಕೆ ಅವನನ್ನು ಎಳೆದುಕೊಂಡು ದುಮುಕಿ ಸಾಯುತ್ತಾಳೆ. ಈ ಕತೆಯಲ್ಲಿ ಗಿರಿಜವ್ವೆಯ ಸಾವು ದುರಂತವಾಗಿ ಕಾಣದೆ ಆಕೆ ಒಂದು ಮೌಲ್ಯವನ್ನು ಎತ್ತಿ ಹಿಡಿದಂತಾಗುತ್ತದೆ.

'ಸಾವಿಯಬ್ಬೆ' ಕತೆಯಲ್ಲಿ ನಾಯಕಿಯಾದ ಸಾವಿಯಬ್ಬೆಯ ಪಾತ್ರವು ಪರಂಪರಾಗತ ಮೌಲ್ಯದ ಬೆಳಕಿನಲ್ಲಿಯೆ ಬೆಳಗುತ್ತದೆ. ಸಾವಿಯಬ್ಬೆಯು ಮಾರಸಿಂಹ ತನಗೆ ಮಕ್ಕಳಿಲ್ಲದ್ದರಿಂದ ತಂದು ಮಗನಂತೆ ಬೆಳಸಿದ ಸಾಕು ಮಗಳಾಗಿದ್ದಾಳೆ. ಆಕೆ 'ಸ್ವಯಂವರದಲ್ಲಿ ಅನೇಕ ಯೋಧರನ್ನು ಸೋಲಿಸುವ ಧೈರ್ಯ ತೋರಿಸುತ್ತಾಳೆ. ಆದರೆ ತನ್ನನ್ನು ಸೋಲಿಸಿದ ಲೋಕಣ್ಣನಿಗೆ ತತಕ್ಷಣ ಹೆಣ್ಣಿನಂತೆ ಆಗುತ್ತಾಳೆ.' ಯುದ್ಧಮಾಡಬೇಕಾದ ಸಂದರ್ಭದಲ್ಲಿ ತಾನು ಲೋಕಣ್ಣನೊಡನೆ ಹೋಗುತ್ತಾಳೆ. ಲೋಕಣ್ಣನಿಗೆ ಏಟು ಬಿದ್ದಾಗ ಈಕೆ ಧೈರ್ಯವಾಗಿ ಕಾದಾಡಿ ತಾನು ಏಟು ತಿನ್ನುತ್ತಾಳೆ. ಆದರೆ, ಪತಿವ್ರತೆಯಾಗಿಯೇ ಸಾಯಬೇಕು ಎಂಬುದರಿಂದ ವಿಷದ ಗುಳಿಗೆ ನುಂಗಿ ಲೋಕಣ್ಣ ಸಾಯುವ ಮುನ್ನ ಸಾವನ್ನಪ್ಪುತ್ತಾಳೆ.

'ಶ್ರೀ ರಂಗ' ಎಂಬ ಪಾತ್ರವು 'ಪೆನುಕೊಂಡ ಕೃಷ್ಣಮೂರ್ತಿ' ಎಂಬ ಕತೆಯಲ್ಲಿ ಬರುವ ಪಾತ್ರ ಚಿತ್ರಣವಾಗಿದೆ. ಶ್ರೀರಂಗನು ಪೆನುಕೊಂಡಯ್ಯ ರಾಜನಾದ ಮೇಲೆ ಸುಖಲೋಲುಪತೆಯಲ್ಲಿ ಮುಳುಗುತ್ತಾನೆ. ಇವರ ಉಡಾಫೆಯಿಂದಾಗಿ ರಾಜ್ಯದ ಮೇಲೆ ಮುಸ್ಲಿಂರು ದಾಳಿ ಮಾಡುತ್ತಾರೆ.

ವಿಲಾಸಿಯಾಗಿದ್ದವ ಇದ್ದಕ್ಕಿದ್ದಂತೆ ಯುದ್ಧಕ್ಕೆ ತಯಾರಿಯಾಗುತ್ತಾನೆ. ಮುಸ್ಲೀಮರು ದೇಶದ ಮೇಲೆ ದಾಳಿ ಮಾಡಿದಾಗ ಈತನ ತಾಯಿ ಲಕುಮಾಂಬೆ ಹತ್ತಿರದ ಬೆಟ್ಟದ ಮೇಲೆ ಹೋಗಿ ಸುರಕ್ಷಿತವಾಗಿರಬೇಕೆಂಬ ಶ್ರೀರಂಗನ ಮಾತನ್ನು ಒಪ್ಪುವುದಿಲ್ಲ. ಬದಲಾಗಿ ತಾನು ಮಾಡಿಸಿದ ಚಿನ್ನದ ಕೃಷ್ಣಮೂರ್ತಿ ವಿಗ್ರಹವನ್ನು ಮುಸಲ್ಮನರ ಧಾಳಿಯಿಂದ ರಕ್ಷಿಸುವುದು ಲಕುಮಾಂಬೆಗೆ ಮುಖ್ಯವಾಗುತ್ತದೆ.

'ಹಾಟ್ ಷೇಪ್ ಸಿಟೂ' ಎಂಬ ಈಜಿಪ್ಟ್‌ನ ಹೆಸರನ್ನು ಕುರಿತಾದ ಪಾತ್ರವು ಮಾಸ್ತಿಯವರ ಚಾರಿತ್ರಿಕ ಕತೆಯಲ್ಲಿ ಕಾಣಬಹುದು. ಈ ಪಾತ್ರ 'ರಾಣಿ ಹಾಟ್ ಷೇಪ್ ಸಿಟೂ' ಕತೆಯ ಪ್ರಧಾನ ಪಾತ್ರವಾಗಿದ್ದಾಳೆ. ಈಕೆ ಈಜಿಫ್ಟ್‌ನ ಸಂಪ್ರದಾಯದಂತೆ ಆಕೆ ಒಡಹುಟ್ಟಿದ ತಮ್ಮನನ್ನೆ ಮದುವೆಯಾಗಿ ಒಂದು ಮಗುವನ್ನು ಪಡೆಯುತ್ತಾಳೆ. ಹಿರಿಯಳಾದುದ್ದರಿಂದ ಹಾಗೂ ಪಟ್ಟದ ರಾಣಿಯ ಮಗಳಾದುದ್ದರಿಂದ ರಾಜ್ಯದ ಅಧಿಕಾರ ಸಂಪ್ರದಾಯದಂತೆ ಅವಳಿಗೆ ಸೇರುತ್ತದೆ. ಆಕೆ ತಾನು ಒಂದು ಗಂಡೆಂಬಂತೆ ಬಾಳನ್ನು ನಡೆಸುತ್ತಾಳೆ.

'ಕೇಟೋ' ಈ ಪಾತ್ರವು ರೋಮ್ ದೇಶದ ವ್ಯಕ್ತಿಯೊಬ್ಬನನ್ನು ಕುರಿತ ಕತೆಯಾದ 'ಸಂಯಮಿ ಕೇಟೋ' ಎಂಬ ಕತೆಯಲ್ಲಿ ಕಾಣಬಹುದು. ಕತೆಯ ಆರಂಭದಲ್ಲಿಯೇ ಕೇಟೋವನ್ನು 'ಮಹಾತ್ಮ' ಎಂದು ಕತೆಗಾರರು ಕರೆದಿದ್ದಾರೆ. ಕೇಟೋನ ವ್ಯಕ್ತಿತ್ವವನ್ನು ಕೀರ್ತಿಸುವ ದನಿಯಿಂದಲೇ ಕತೆ ಪ್ರಾರಂಭವಾಗಿದೆ. ರೋಮಿನ ಪುರಾತನ ಅತ್ಯುತ್ತಮ ಸಂಪ್ರದಾಯದ ಅಂದಿನ ಅತ್ಯುತ್ತಮ ಪ್ರತಿನಿಧಿ ಕೇಟೋ.

**೪.೩ ಪೌರಾಣಿಕ ಕಥಾ ಪಾತ್ರಗಳು:**

ಮಾಸ್ತಿಯವರ ಸಾಹಿತ್ಯದಲ್ಲಿ ಬರುವ ಪೌರಾಣಿಕ ಪಾತ್ರಗಳು ಮಾನವ ಜೀವನದ ಮಟ್ಟದಲ್ಲಿ ವ್ಯವಹರಿಸುತ್ತದೆ. ಇಲ್ಲಿ ದೇವರ ಕಲ್ಪನೆಗು ಪೌರಾಣಿಕ ಪಾತ್ರಗಳಿಗು ಇರುವ ಸಂಬಂಧ ಮತ್ತು ವ್ಯತ್ಯಾಸಗಳನ್ನು ಮಾಸ್ತಿಯವರು ಗುರುತಿಸಲು ಪ್ರಯತ್ನಿಸಿದ್ದಾರೆ.

'ಮಾಲಿನಿ' ಎಂಬ ಪಾತ್ರವು 'ಗೌತಮಿ ಹೇಳಿದ ಕತೆ' ಎಂಬ ಕತೆಯಲ್ಲಿ ಕಂಡು ಬಂದರು ಈ ಕತೆಯನ್ನು ಹೇಳುವ ನಾಯಕಿಯೇ ಗೌತಮಿ ಈ ಅಂಶ

ಕತೆಯ ಕೊನೆಯಲ್ಲಿ ತಿಳಿಯುತ್ತದೆ. ಕತೆಯಲ್ಲಿ ಗೌತಮಿ ಈ ಅನುಭವದ ಆಧಾರದ ಮೇಲೆ "ಹುಡುಗಿಯರಿಗೆ ವಯಸ್ಸಾಗುವ ಮುನ್ನ ಮದುವೆ ಆಗಲಿ" ಎನ್ನುವ ನಿರ್ಧಾರಕ್ಕೆ ಬಂದಿದ್ದಾಳೆ. ಶಕುಂತಲೆಯ ಜೀವನಕ್ಕೆ ಸಂಬಂಧಪಟ್ಟಂತೆ ಈ ಮಾತನ್ನು ಬಳಸಲಾಗಿದೆ. ಚಿಕ್ಕಂದಿನಲ್ಲಿ ಕಣ್ವಾಶ್ರಮಕ್ಕೆ ಸೇರುವ ಮಾಲಿನಿ ಅಲ್ಲಿನ ವಾಸಿಗಳಾದ ಭಾರದ್ವಾಜ, ದತ್ತ ಇವರೊಂದಿಗೆ ಬೆಳೆಯುತ್ತಾಳೆ. ಆಶ್ರಮದ ಮಹರ್ಷಿಗಳು ಭಾರದ್ವಜನಿಗೆ ಮಾಲಿನಿಯನ್ನು ಮದುವೆಯಾಗುವಂತೆ ಹೇಳುತ್ತಾರೆ. ಭಾರದ್ವಜ–ಮಾಲಿನಿ ಇಬ್ಬರೂ ಒಬ್ಬರನ್ನೊಬ್ಬರು ಪ್ರೇಮಿಸುತ್ತಾರೆ. ಹೊಳೆಯಲ್ಲಿ ಈಜಲು ಹೋದ ಭಾರದ್ವಜ ಆಕಸ್ಮಿಕವಾಗಿ ಸಾಯುತ್ತಾನೆ. ಮಾಲಿನಿ ಒಂಟಿಯಾಗುತ್ತಾಳೆ.

'ಕುಚೇಲನ ಭಾಗ್ಯ' ಎಂಬ ಕತೆಯಲ್ಲಿ ಕುಚೇಲ ಎಂಬ ಪೌರಾಣಿಕ ಪಾತ್ರ ಕಾಣಿಸುತ್ತದೆ. ಈ ಹೆಸರು ಬರಲು ಕಾರಣವೇನೆಂದರೆ ಉಡುವುದಕ್ಕೆ ಬಟ್ಟೆಯಿಲ್ಲದೆ 'ಕಂಥೆಗಳನ್ನು' ಧರಿಸುತ್ತಿದುದ್ದರಿಂದ ಅವನಿಗೆ ಕುಚೇಲ ಎಂಬ ಹೆಸರು ಬಂದಿದೆ. ಅವನ ಹೆಂಡತಿ ಒಮ್ಮೆ ಅವನನ್ನು ಶ್ರೀಕೃಷ್ಣನಲ್ಲಿಗೆ ಹೋಗಿ ಬೇಡಿ ತಮ್ಮ ಬಡತನವನ್ನು ನಿವಾರಿಸಿಕೊಳ್ಳಬೇಕೆಂದು ಬಲವಂತ ಪಡಿಸಿದಾಗ ಕುಚೇಲ ಕೃಷ್ಣನ ಬಳಿ ಬೇಡಲು ಹೋಗುತ್ತಾನೆ. ಬಡಬ್ರಾಹ್ಮಣನಾದ ತನಗೆ ಕೃಷ್ಣನ ದರ್ಶನ ಲಭಿಸುವುದೋ ಎಂಬ ಸಂಶಯ ಅವನಿಗಿರುತ್ತದೆ. ಆದರೆ ಕೃಷ್ಣ ರುಕ್ಮಿಣಿಯರು ಕುಚೇಲನನ್ನು ಆದರದಿಂದ ಬರಮಾಡಿಕೊಂಡು ಸತ್ಕರಿಸುತ್ತಾರೆ. ನಂತರ ಮುಂದೆ ಕುಚೇಲ ಅಗರ್ಭ ಶ್ರೀಮಂತನಾಗುತ್ತಾನೆ.

ಒಟ್ಟಾರೆ. ಈ ಮೇಲಿನ ಹಲವಾರು ಅಂಶಗಳನ್ನು ಅವಲೋಕಿಸಿದಾಗ ಮಾಸ್ತಿ ತಮ್ಮ ಕತೆಗಳಲ್ಲಿ ವಿವಿಧ ಬಗೆಯ ಪಾತ್ರಗಳನ್ನು ಸಮಾನ ರೀತಿಯಲ್ಲಿ ನೋಡಿದ್ದಾರೆ. ಇಲ್ಲಿ ಆಯಾ ಕಥಾವಸ್ತು, ಘಟನೆ, ಸನ್ನಿವೇಶಗಳಿಗೆ ಅನುಗುಣವಾಗಿ ಪಾತ್ರಗಳು ಮೂಡಿಬರುವುದರಿಂದ ಒಳ್ಳೆಯವರು ಕೆಟ್ಟವರಾಗಿ ಮೂಡಿಬಂದಿರಬಹುದಷ್ಟೆ.

# ಅಧ್ಯಾಯ : ೦೫

## ಮಾಸ್ತಿಯವರ ಕಥೆಗಳ ಸಮಗ್ರ ನೋಟ

ಮಾಸ್ತಿಯವರ ಸಾಹಿತ್ಯ ಸೃಷ್ಟಿ ಬಹುಮುಖವಾದದ್ದು, ವಿಶಾಲವಾದದ್ದು, ಮತ್ತು ಮೇಲುಮಟ್ಟದ್ದು, ಬಹುಶ: ಇವರ ಪ್ರತಿಭೆ ಇತರ ಸಾಹಿತ್ಯ ರೂಪಗಳಿಗೆ ಹೊಂದಿಕೊಂಡದ್ದಕ್ಕಿಂತ ಹೆಚ್ಚಾಗಿ ಸಣ್ಣಕತೆಗೆ ಹೊಂದಿಕೊಂಡಿದೆ' ಕೇವಲ ಗಾತ್ರವೊಂದನ್ನೇ ಲೆಕ್ಕಕ್ಕೆ ತೆಗೆದುಕೊಂಡರೂ ಅವರ ಬರವಣಿಗೆಯಲ್ಲಿ ಸಣ್ಣ ಕಥೆಗೆ ಮೊದಲನೆ ಸ್ಥಾನ ಸಲ್ಲಬೇಕಾಗುತ್ತದೆ. ಅವರು ಇದುವರೆವಿಗೆ ಪ್ರಕಟಿಸಿರುವ ಕಥೆಗಳು ಅಚ್ಚಿನಲ್ಲಿ ಸುಮಾರು ೧೩೨೫ ಪುಟಗಳಿಗಿಂತ ಸ್ವಲ್ಪ ಹೆಚ್ಚಾಗುತ್ತವೆ. ಇತರೆ ಯಾವ ಸಾಹಿತ್ಯ ಪ್ರಕಾರದಲ್ಲೂ ಅವರು ಈ ಪ್ರಮಾಣದ ಸೃಷ್ಟಿಮಾಡಿಲ್ಲ. ಗಾತ್ರದ ದೃಷ್ಟಿಯಿಂದ 'ಧರ್ಮಕಿಂಕರ ಫೀಟ್ಸ್ ಸ್ಟೀಫನ್' ಚಿಕ್ಕದಾದರೆ (ಏಳುಪುಟಗಳು) 'ಚಿಕ್ಕವ್ವ' ದೊಡ್ಡದಾದ ಸಣ್ಣಕತೆಯಾಗಿದೆ (ಮೂವತ್ತೆಂಟು ಪುಟಗಳು).

ಮಾಸ್ತಿಯವರ ಎಲ್ಲ ಕತೆಗಳನ್ನು ನೋಡುವಂತಹ ಸಂದರ್ಭದಲ್ಲಿ ಅವರ ಕಥೆಗಳನ್ನು ಅರ್ಧಕ್ಕೂ ಹೆಚ್ಚು ಭಾಗದ ಕಥಾಸಾಹಿತ್ಯದಲ್ಲಿ ಗಂಡು-ಹೆಣ್ಣಿನ ಸಂಬಂಧ ಮುಖ್ಯವಾಗಿರುತ್ತದೆ. ಐತಿಹಾಸಿಕ ಮತ್ತು ಪೌರಾಣಿಕ ಕತೆಗಳಲ್ಲೂ ಈ ಅಂಶ ಮುಖ್ಯವಾಗಿ ಬರುತ್ತದೆ. ಆದರೆ ಇದು ಸಮಾಜಿಕ ಕತೆಗಳಲ್ಲಿ ತೋರುವಷ್ಟೆ ಪ್ರಮಾಣದಲ್ಲಿ ಕಾಣಬರುವುದಿಲ್ಲ ಅಂತೆಯೇ ಗಂಡು-ಹೆಣ್ಣಿನ ಸಂಬಂಧದ ಇನ್ನೊಂದು ಮುಖವನ್ನು ನಾವು ಮೌಲ್ಯ ಮತ್ತು ಪ್ರವೃತ್ತಿಗಳನ್ನು ಎದುರುಬದುರಾಗಿಸುವುದರಲ್ಲಿ ಕಾಣುತ್ತೇವೆ. ಪ್ರವೃತ್ತಿ ಎಲ್ಲ ಮನುಷ್ಯರಲ್ಲೂ ಸಹಜವಾದುದು ಎಂದು ಮಾಸ್ತಿ ನಂಬುತ್ತಾರೆ. ಸಂನ್ಯಾಸಿಗಳಲ್ಲೂ ಪ್ರವೃತ್ತಿಯ ಹಾಗೂ ಮಾನವ ಸಂಬಂಧದ ಆರ್ದ್ರತೆಯನು ಕಾಣಿಸುತ್ತಾರೆ. ಇದರ ಜೊತೆಗೆ ನೀತಿ ಹಾಗೂ ಭಾವನೆ ಮಾಸ್ತಿಯವರ ಕಥಾಸಾಹಿತ್ಯದ ಹಲವು ಸಂದರ್ಭಗಳಲ್ಲಿ ಮುಖಾಮುಖಿಯಾಗುತ್ತದೆ. ಅಷ್ಟೇ ಅಲ್ಲದೆ ಇವರ ಇಡಿಯ ಕಥಾ ಸಾಹಿತ್ಯದ

ಸಂದರ್ಭದಲ್ಲಿ ನೀತಿ ಒಂದು ಒಳ ಎಳೆಯಂತಿರುವ ಅಂಶ ಗಮನಾರ್ಹವಾದುದಾಗಿದೆ.

ಮಾಸ್ತಿಯವರು ರಚಿಸಿರುವ ಇಡೀ ಕಥಾ ಸಾಹಿತ್ಯದಲ್ಲಿ ಹೆಣ್ಣಿಗೆ ಅವರು ನೀಡಿರುವ ಸ್ಥಾನ ಬಹಳ ಮುಖ್ಯವಾದುದ್ದಾಗಿದೆ. ಹೆಣ್ಣಿನ ಎಲ್ಲ ಮುಖಗಳನ್ನೂ ತಾಯಿ, ಹೆಂಡತಿ, ಸಹೋದರಿ, ಪ್ರೇಮಿ, ಕಲಾವಿದೆ. ಅಧಿಕಾರಿ, ರಾಣಿ, ವೀರವನಿತೆ, ವೇಶ್ಯೆ, ಇತ್ಯಾದಿಯಾಗಿ ಮಾಸ್ತಿ ತಮ್ಮ ಸಾಹಿತ್ಯದಲ್ಲಿ ಚಿತ್ರಿಸಿದ್ದಾರೆ. ಇವರು ಸೃಷ್ಟಿಸುವ ಎಲ್ಲ ಹೆಣ್ಣುಗಳು ಸುಂದರಿಯಾಗಿರುತ್ತಾರೆ. ಅಲ್ಲದೇ ಎಲ್ಲಿಯೂ ಕುರೂಪಿ ಹೆಣ್ಣನ್ನು ಸೃಷ್ಟಿಸಲು ಹೋಗುವುದೇ ಇಲ್ಲ. 'ಮೇಲೂರಿನ ಲಕ್ಷ್ಮಮ್ಮ' ಕಥೆಯ ಕುರುಡಿಯಾದ ಲಕ್ಷ್ಮಮ್ಮಳು 'ರೂಪವಂತೆ' ಯಾಗಿರುತ್ತಾಳೆ. ಒಮ್ಮೊಮ್ಮೆ ತಪ್ಪಿ ನಡೆಯುವ ಹೆಣ್ಣನ್ನು ಸೃಷ್ಟಿಸದರೂ ಇಂತಹ ಪಾತ್ರಗಳು ತುಂಬ ಅಪರೂಪವಾಗಿ ನಮಗೆ ಕಾಣಬರುತ್ತದೆ. ಮಾಸ್ತಿಯವರ ಕತೆಗಳಲ್ಲಿ 'ಮುನೀಶ್ವರನ ಮರ' ಸಣ್ಣಕತೆಯ ರಾಜಮ್ಮ, 'ವೆಂಕಟಿಗನ ಹೆಂಡತಿ'ಯ ಲಿಂಗಿ, ಈ ಪಾತ್ರಗಳು ಮುಖ್ಯವಾಗಿ ತಪ್ಪಿ ನಡೆಯುವುದಕ್ಕೆ ಆ ಹೆಣ್ಣಿನ ಪರಿಸ್ಥಿತಿಗಿಂತ ಗಂಡಿನ ಬಲತ್ಕಾರ ಅಥವಾ ಆಮಿಷ, ಅಸಡ್ಡೆ ಹೆಚ್ಚಿನ ರೀತಿಯ ಕಾರಣವಾಗಿರುತ್ತದೆ. ಉದಾ: 'ವೆಂಕಟಿಗನ ಹೆಂಡತಿ' ಕತೆಯ ಲಿಂಗಿಗೆ ಸಾಹುಕಾರನ ಆಮಿಷ, ಹಾಗೂ 'ಮುನೀಶ್ವರನ ಮರದ' ರಾಜಮ್ಮಳಿಗೆ ಅವಳ ಗಂಡನ ಅಸಡ್ಡೆ ತಪ್ಪಿ ನಡೆಯಲು ಕಾರಣವಾಗಿರುತ್ತದೆ.

ಯಾವುದಾದರು ಸಂದರ್ಭದಲ್ಲಿ ಹೆಣ್ಣು ತಪ್ಪಿ ನಡೆಯುವ ಸಂದರ್ಭದಲ್ಲಿ ಮಾಸ್ತಿ ಹೆಣ್ಣಿನ ಮೇಲೆ ತಪ್ಪನ್ನು ಒತ್ತು ತರುವುದಕ್ಕಿಂತ ಮರುಕವನ್ನು ಹುಟ್ಟಿಸುವ ಪಾತ್ರವನ್ನಾಗಿ ಆಕೆಯನ್ನು ಚಿತ್ರಿಸುತ್ತಾರೆ. ಅದಕ್ಕೆ ಸಾಕ್ಷಿಯೆಂಬಂತೆ 'ವೆಂಕಟಿಗನ ಹೆಂಡತಿ' ಕತೆಯ ಲಿಂಗಿ ತನ್ನ ತಪ್ಪು ತಿಳಿದು ಗಂಡನಲ್ಲಿ ಕ್ಷಮೆ ಯಾಚಿಸುವುದರ ಮೂಲಕ ಉತ್ತಮ ಹೆಣ್ಣಾಗಿ ಕಾಣುತ್ತಾಳೆ.

ದಾಂಪತ್ಯದ ಕತೆಯನ್ನು ಹೇಳುವಾಗ ಗಂಡು-ಹೆಣ್ಣಿನ ಸಂಬಂಧದ ಸಂದರ್ಭದಲ್ಲಿ ಹೆಣ್ಣು ತನ್ನ ಗಂಡನಿಗೆ ವಿಧೇಯಳಾಗಿರುತ್ತಾಳೆ; ಆತನ ದುಷ್ಟತನ ವಿಪರೀತವೆನಿಸಿದಾಗ ಅವನನ್ನು ಬಿಟ್ಟು ಹೋಗುತ್ತಾಳೆ. ಈ ರೀತಿಯಾದ

ಚಿತ್ರಗಳನ್ನು ನೀಡುವುದರ ಮೂಲಕ ಮಾಸ್ತಿ ಸಂಪ್ರದಾಯಿಕ ಭಾರತೀಯ ಸಮಾಜದ ಸಂದರ್ಭದಲ್ಲೂ ಹೆಣ್ಣು ಸ್ವತಂತ್ರವಾಗಿ ಜೀವಿಸಲು ಸಾಧ್ಯ ಎನ್ನುವುದನ್ನು ತೋರಿಸುತ್ತಾರೆ. 'ಚೆನ್ನಮ್ಮ' ಕತೆಯ ಚೆನ್ನಮ್ಮ, 'ನಳಿನಿಯ ತಂದೆಯ' ಲಕ್ಷ್ಮಿ ಈ ಪಾತ್ರಗಳ ಮೂಲಕ ಹೆಣ್ಣು ಸಮಾಜದಲ್ಲಿ ಸ್ವತಂತ್ರ ವಾಗಿ ಬಾಳಲು ಸಾಧ್ಯ ಎನ್ನುವುದನ್ನು ಮಾಸ್ತಿ ಸೂಚಿಸುತ್ತಾರೆ.

ಮಾಸ್ತಿಯವರು ದಾಕ್ಷಿಣ್ಯವಿರುವ ಹೆಣ್ಣನ್ನು ಚಿತ್ರಿಸಿದಂತೆ ಮುಗ್ಧ ಹೆಣ್ಣುಗಳನ್ನು ಚಿತ್ರಿಸುತ್ತಾರೆ. ಸಂಸ್ಕೃತಿಯ ಮೌಲ್ಯಗಳಲ್ಲಿ ನಂಬಿಕೆ ಇರುವ ತನ್ನ ದೇಶಕ್ಕಾಗಿ ಬೇರೊಬ್ಬರ ಒಳಿತಿಗಾಗಿ ತನ್ನ ಬಲಿದಾನ ಮಾಡುವವರೆಗೂ ಮುಂದುವರೆಯುತ್ತಾಳೆ.

ಇತಿಹಾಸದ ಸಂದರ್ಭದಲ್ಲಿಯೂ ಹೆಣ್ಣಿನ ಬಗೆಗೆ ಮರುಕ ಮತ್ತು ಗೌರವದ ಭಾವನೆ ಬರುವಂತಹ ಚಿತ್ರಗಳನ್ನು ಮಾಸ್ತಿ ಆಯ್ದುಕೊಂಡು ಸೃಷ್ಠಿಸುತ್ತಾರೆ. 'ವಿಚಿತ್ರ ಪ್ರೇಮ' ಎಂಬ ಕತೆಯಲ್ಲಿ ಮೂರು ಗಂಡಸರನ್ನು ಪ್ರೇಮಿಸುವ ಹೆಣ್ಣನ್ನು ಮಾಸ್ತಿ ಉದಾರವಾದ ಭಾವನೆ ಹುಟ್ಟುವಂತೆ ರಚಿಸಿದ್ದಾರೆ. ಆ ಹೆಣ್ಣು ಯಾವ ಗಂಡನ್ನು ತಿರಸ್ಕಾರದಿಂದ ನೋಡುವುದಕ್ಕಿಂತ, ಗೌರವದ ಭಾವನೆಯಿಂದಲೇ ನೋಡುವುದು ಇದಕ್ಕೆ ಕಾರಣವಾಗಿದೆ. 'ರಾಣಿ ಹಾಟ್‌ಷಿಪ್ ಸಿಟೂ' ಕತೆಯ ರಾಣಿಯು ತನ್ನ ಸಂಪ್ರದಾಯದ ನಡವಳಿಕೆಯಂತೆ ತಮ್ಮನನ್ನು ಮದುವೆಯಾಗಿ ರಾಣಿಯ ದರ್ಪವನ್ನೇ ಮೆರೆದರು ಕೊನೆಯಲ್ಲಿ ಆಕೆಗೆ ತಾನು ಹೆಣ್ಣಾಗಬೇಕು ಒಲಿದ ಗಂಡನ್ನು ಮದುವೆಯಾಗಬೇಕು ಎನ್ನುವ ಆಸೆ ಮೂಡುವಂತೆ ಚಿತ್ರಣವಿದೆ.

ಮತ್ತಷ್ಟು ಅವರ ಕಥೆಯನ್ನು ನೋಡುತ್ತಿದ್ದಂತೆ ಅವರ ಹಲವು ಕತೆಗಳಲ್ಲಿ ಬರುವ ಗಂಡಿಗೆ ಹೆಣ್ಣಿನ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳುವ ಪ್ರಕ್ರಿಯೆಯಿದೆ. 'ಗೌತಮಿ ಹೇಳಿದ ಕತೆ'ಯ ದತ್ತನಿಗೆ ಮಾಲಿನಿ; 'ಮುನೀಶ್ವರನ ಮರ' ಕತೆಯ ರಾಮಪ್ಪನಿಗೆ ರಾಜಮ್ಮ ಲೋಕಮಾತೆಯಾಗಿ ಕಂಡಿದ್ದಾರೆ. ಈ ಮೇಲಿನ ಮಾತಿನಿಂದ ಮಾಸ್ತಿ ಹೆಣ್ಣನ್ನು ಸಾಕ್ಷಾತ್ ದೈವ ಸ್ವರೂಪವಾಗಿ ಗುಣಿಸಿರುವಂತೆ ಬೋಧೆಯಾಗುತ್ತದೆ. ಮಾಸ್ತಿಯವರಿಗೆ ಹೆಣ್ಣಿನ ಬಗೆಗೆ ಈ ಗೌರವ ಭಾವನೆ ಇರುವುದರಿಂದ ಅವರು ಅಗತ್ಯವಿಲ್ಲದೆಡೆಯಲ್ಲಿ ಹೆಣ್ಣನ್ನು ವರ್ಣಿಸುವುದಿಲ್ಲ, ಇವರ

ಕತೆಯಲ್ಲಿನ ಹೆಣ್ಣು ಎಲ್ಲೂ ಹೆಚ್ಚು ಭಾವುಕಳಾಗುವುದಿಲ್ಲ. ಅದಕ್ಕೆ ಪ್ರತಿರೂಪವಾಗಿ ಕನ್ನಡದ ಮಹಿಳೆಯರು ಬಂದ ಕತೆ ಕಾದಂಬರಿಗಳಲ್ಲಿ ಹೆಣ್ಣು ಭಾವುಕಳಾಗುತ್ತಾಳೆ. ಅಲ್ಲದೆ ಹಲವು ಸನ್ನಿವೇಶಗಳಲ್ಲಿಯಾದರೋ ಗಂಡಿನಷ್ಟೇ ಅಥವಾ ಗಂಡಿಗಿಂತ ಹೆಚ್ಚಾಗಿ ಸ್ಥೈರ್ಯದಿಂದ ಹೆಣ್ಣು ಜೀವನದ ನೋವನ್ನು ಎದುರಿಸುತ್ತಾಳೆ. 'ಸಾರಿಪುತ್ರನ ಕಡೆಯ ದಿನಗಳು' ಕತೆಯಲ್ಲಿ ಸಾರಿಪುತ್ರ ನಲವತ್ತು ವರ್ಷಗಳ ನಂತರ ತನ್ನ ಹೆಂಡತಿಯನ್ನು ಕಾಣುವ ಸಂದರ್ಭದಲ್ಲಿ ಸ್ವಲ್ಪ ಭಾವುಕನಾಗುತ್ತಾನೆ. ಆದರೆ ಅವನ ಹೆಂಡತಿಯಲ್ಲಿ ಆ ಭಾವುಕತೆ ಇಲ್ಲ. ಮಾಸ್ತಿಯವರ ಕತೆಗಳ ಅಧ್ಯಯನದ ಸಂದರ್ಭದಲ್ಲಿ ಮತ್ತಷ್ಟು ಆಳವಾಗಿ ನೋಡಿದಾಗ ಗಂಡು ತಪ್ಪಿ ನಡೆಯುವುದು ಎಂದರೆ ಆತ ಕುಡುಕನಾಗಿರುವುದು, ಕಳ್ಳನಾಗಿರುವುದು, ಹಾಗೂ ವ್ಯಭಿಚಾರಿಯಾಗಿರುವುದರಲ್ಲಷ್ಟೆ ಕಾಣುತ್ತೇವೆ. 'ಚೆನ್ನಮ್ಮ' ಕತೆಯ ರಾಮಪ್ಪ, 'ನಳಿನಿಯ ತಂದೆ' ಕತೆಯ ವಿಶ್ವನಾಥ, 'ಚಟ್ಟೆಕಾರ ತಾಯಿ' ಯ ವ್ಯಕ್ತಿ, 'ಎಮ್ಮೆಕಳವು' ಕತೆಯ ಅಣ್ಣ, 'ಬಾಳುಚೌಕಾಬಾರ' ಕತೆಯ ಚನ್ನರಾಯಪಟ್ಟಣದ ಹುಡುಗ, ಈ ರೀತಿಯ ಪಾತ್ರಗಳು ವೇಶ್ಯೆಯ ಸಹವಾಸ, ಹಾಗೂ ಜೂಜು ಕುಡಿತಗಳಿಂದ ದುಷ್ಟರಾಗುತ್ತಾರೆ. ಈ ರೀತಿಯ ಕೆಟ್ಟ ಚಟಗಳಿಗಾಗಿ ತಮ್ಮ ಮನೆಯಲ್ಲಿಯೇ ಕಳವು ಮಾಡಲು ಅವರು ಹೇಸುವುದಿಲ್ಲ. ಗಂಡಿನ ಈ ದುಷ್ಟತನ ಅತಿಯಾದಾಗ ಹೆಣ್ಣು ಅವನಿಂದ ದೂರವಾಗುತ್ತಾಳೆ ಅಥವಾ ಸಹಿಸಿಕೊಂಡು ಬಾಳುವುದರ ಮೂಲಕ ಉದ್ದಾತ್ತಳಾಗುತ್ತಾಳೆ.

ಮೇಲೆ ಹೇಳಿದಂತೆ ದುಷ್ಟತನಗಳಿಲ್ಲದಿದ್ದರೂ ಕೆಲವು ದೌರ್ಬಲ್ಯ ಹಾಗೂ ದುಡುಕಿನ ಕ್ಷಣಗಳು ಗಂಡು ಹೆಣ್ಣು ದೂರವಾಗುವಂತೆ ಮಾಡುತ್ತವೆ. 'ಸಂನ್ಯಾಸಿ ಅಲ್ಲದ ಸಂನ್ಯಾಸ' ಕತೆಯ ನರಸಿಂಹಯ್ಯ ಬೆಂಡೆಕಾಯಿ ಹುಳಿಯ ಆಸೆಯ ಒಂದು ದೌರ್ಬಲ್ಯಕ್ಕೆ ಒಳಗಾಗಿ ಸಂನ್ಯಾಸ ಸ್ವೀಕರಿಸುತ್ತಾನೆ. 'ಆಚಾರ್ಯರ ಪತ್ನಿ'ಯ ಆಚಾರ್ಯರು ಹೆಂಡತಿ ತಪ್ಪು ಮಾಡದಳು ಎಂದು ದುಡುಕಿನಲ್ಲಿ ಸಂನ್ಯಾಸ ಸ್ವೀಕರಿಸುತ್ತಾರೆ. ಹೀಗೆ ತಪ್ಪು ಮಾಡಿಕ ಗಂಡು, ಹಾಗೂ ತಪ್ಪು ಮಾಡಿದ ಹೆಣ್ಣು ತಮ್ಮ ತಪ್ಪನ್ನು ತಿಳಿದು ಮತ್ತೆ ಒಂದಾಗುವ ಸಾಧ್ಯತೆಯನ್ನು ಮಾಸ್ತಿ ಸೃಷ್ಟಿಸುತ್ತಾರೆ.

'ಸಂನ್ಯಾಸಿ ಅಲ್ಲದೆ ಸಂನ್ಯಾಸ' ಕತೆಯಲ್ಲಿ ತಪ್ಪಿನ ಅರಿವಾದ ನರಸಿಂಹಯ್ಯ ಮತ್ತೆ ಸಂಸಾರ ಹೂಡುತ್ತಾನೆ. 'ವೆಂಕಟಿಗನ ಹೆಂಡತಿ' ತನ್ನ ತಪ್ಪು ತಿಳಿದು ಪಶ್ಚಾತ್ತಾಪ ಪಟ್ಟು ವೆಂಕಟಿಗನ ಬಳಿಗೆ ಬಂದಾಗ ಅವರು ಮತ್ತೆ ಸಂಸಾರ ಹೂಡಲು ಸಾಧ್ಯವಾಗುತ್ತದೆ. ಆದರೆ ಗಂಡಾಗಲಿ ಹೆಣ್ಣಾಗಲಿ ಮಾಡಿದ ತಪ್ಪಿನ ಪ್ರಮಾಣ ಕ್ಷಮಿಸಲು ಅರ್ಹ ಅಲ್ಲದಿದ್ದರೆ ಮತ್ತೆ ಅವರು ಒಂದುಗೂಡುವುದಿಲ್ಲ.

ಇನ್ನು ಮುಂದಕ್ಕೆ ಮಾಸ್ತಿಯವರ ಕತೆಯಲ್ಲಿ ಮೌಲ್ಯದ ಸುತ್ತ ನೋಡುವುದಾದರೆ 'ಒಂದು ಹಳೆಯ ಕತೆ'ಯ ಸಂನ್ಯಾಸಿಗೆ ತಾನು ಪ್ರವೃತ್ತಿ ಜಯಿಸಿದವ'ನು ಎನ್ನುವ ಜಂಭವಿರುತ್ತದೆ. ಇದರಿಂದ ಸಂನ್ಯಾಸಿಯಾಗಲಿ, ವಿದ್ವಾಂಸನಾಗಲಿ "ಸ್ತ್ರೀ ರೂಪು ಸೆಳೆಯುತ್ತದೆ." ಎನ್ನುವ ವ್ಯಾಸವಾಕ್ಯವನ್ನು ಒಪ್ಪುವುದಿಲ್ಲ. ಆದರೆ ಆತ ಏಕಾಂತದಲ್ಲಿ ಹೆಣ್ಣನ್ನು ಕಂಡಾಗ ಆತನ ಪ್ರವೃತ್ತಿ ಜಾಗೃತವಾಗುತ್ತದೆ. 'ಗೌತಮಿ ಹೇಳಿದ ಕತೆ' ಯ ಗೌತಮಿ ತನ್ನ ಜೀವನದಲ್ಲಿ ಚಿಕ್ಕಂದಿನಲ್ಲಿ ನಡೆದ ಕತೆಯನ್ನು ಬಹಳ ವರ್ಷಗಳ ನಂತರ ಹೇಳುವಾಗ ಅವಳಿಗೆ ಚಿಕ್ಕಂದಿನಲ್ಲಿ ಪ್ರೇಮಿಸಿದ್ದ ಭಾರದ್ವಜನ ಸಾವಿರ ಪ್ರಸಂಗ ಹೇಳುವಾಗ ಕಣ್ಣಿನಲ್ಲಿ ನೀರು ಬರುತ್ತದೆ. ಮಾಸ್ತಿಯವರ ಕತೆಯ ನಾಯಕ ಹೆಣ್ಣಿನ ಆಕರ್ಷಣೆಗೆ ಸೋತರೂ ಅವನಲ್ಲಿನ ಸಂಕಲ್ಪಶಕ್ತಿ ಆ ಮೂಲಕ ಗಟ್ಟಿಗೊಳ್ಳುವುದರ ಮೂಲಕ ಆತನಲ್ಲಿ ಕೀಳಿರಿಮೆ ಉಳಿಯದಂತೆ ಮಾಸ್ತಿಯವರು ಅಂತಹ ಸಂದರ್ಭವನ್ನು ನಿರ್ವಹಿಸುತ್ತಾರೆ. ಅಂದರೆ ಸಂನ್ಯಾಸಿ ಪ್ರವೃತ್ತಿ ಜಯಿಸಲಾಗುವುದಿಲ್ಲ ಆ ಪ್ರವೃತ್ತಿಯ ಅರಿವು ಅವನಿಗಿರುತ್ತದೆ. ಆದರೆ ಅದನ್ನು ಆತ ತನ್ನ ಮೌಲ್ಯದ ಕಟ್ಟು ಪಾಡುಗಳಿಗೆ ಬಗ್ಗಿಸುತ್ತಾನೆ. ಎಂಬುದು ಮಾಸ್ತಿಯವರ ಬಯಕೆಯಾಗಿದೆ.

ಹೀಗೆ ಮುಂದುವರೆದು ಮಾಸ್ತಿಯವರು ಮೌಲ್ಯದ ಜೊತೆಗೆ ಕತೆಯ ಪ್ರವೃತ್ತಿಯನ್ನು ಹೋಲಿಕೆ ಮಾಡಿದಂತಹ ಸಂದರ್ಭದಲ್ಲಿ ಪ್ರವೃತ್ತಿ ಎಂಬುವುದು ಪ್ರತಿಯೊಬ್ಬ ಮಾನವ ಜೀವಿಯಲ್ಲೂ ಸಹಜ ಎಂದು ಹೇಳುವಂತೆಯೇ ಅದು ಸ್ವತಂತ್ರವಾಗಿರಬಾರದು ಎಂದು ಇಚ್ಛಿಸುತ್ತಾರೆ. 'ಗೌತಮಿ ಹೇಲಿದ ಕತೆಯಲ್ಲಿ' ಪ್ರವೃತ್ತಿಗೆ ಪ್ರತಿನಿಧಿ ಅನ್ನುವಂತೆ ಮಾಲಿನಿ ಕಂಡು ಬಂದರೆ ಮೌಲ್ಯದ ಪ್ರತಿನಿಧಿಯಾಗಿ 'ದತ್ತ'ನ ಪಾತ್ರ ಕಾಣಿಸಿಕೊಳ್ಳುತ್ತದೆ. ಮಾಲಿನಿಗೆ ಪ್ರವೃತ್ತಿಯನ್ನು

ತಣಿಸಲು ಇದ್ದ ಒಂದು ಅವಕಾಶ 'ದುರದೃಷ್ಟ' ದಿಂದಾಗಿ ತಪ್ಪಿಹೋಗುತ್ತದೆ. ಮುಂದೆ ಮಾಲಿನಿ ಆಕೆ ಬೆಳೆಯುತ್ತಿದ್ದ ಆವರಣದ ಮೌಲ್ಯಗಳಿಗೆ ಬದ್ಧಳಾಗಿರಬೇಕಾಗುತ್ತದೆ.

ಮಾಸ್ತಿಯವರ ದೃಷ್ಟಿಯಲ್ಲಿ ಒಂದು ಸಮಾಜ ಸಮತೋಲನವನ್ನು ಕಳೆದುಕೊಳ್ಳಲು ಹಾಗೂ ಸಮಾಜದ ಸಂಸ್ಕೃತಿ ಅವನತಿ ಹೊಂದಲು ಪಾತ್ರಗಳ ನಡವಳಿಕೆಯು ಕಾರಣ ಎಂದು ಮಾಸ್ತಿಯವರು ಹೇಳಲು ಬಯಸುತ್ತಾರೆ. ಅಂತಹದೆ ಅಂಶಗಳನ್ನು ಇವರ ಕತೆಯಲ್ಲಿ ಕಾಣಬಹುದು. 'ಜೋಗ್ಯೋರ ಅಂಜಪ್ಪನ ಕೋಳಿಕತೆ' ಯಲ್ಲಿನ ಹೆಣ್ಣು ನೀತಿ ತಪ್ಪಿರುವುದರಿಂದ ನ್ಯಾಯವಾಗಿಯೇ ಇರಲು ಬಯಸುವ ಅಂಜಪ್ಪ ಸುಳ್ಳು ಹೇಳುವ ಸನ್ನಿವೇಶ ಉಂಟಾಗುತ್ತದೆ. ಅದರಂತೆಯೆ 'ಕೆಟ್ಟ ಕಾಲ' ಕತೆಯಲ್ಲಿ ಮಾಸ್ತಿಯವರ ಐತಿಹಾಸಿಕ ಕಾದಂಬರಿಗಳಂತೆಯೇ ಅಧಿಕಾರದ ಸ್ಥಾನದಲ್ಲಿರುವ ವ್ಯಕ್ತಿಗಳ ದುಷ್ಟತನ ಆ ಸಮಾಜದ ವ್ಯವಸ್ಥೆಯನ್ನು ಹಾಳುಮಾಡುವ ಚಿತ್ರವಿದೆ. ಹೀಗಾಗಿ ಯಾವುದೇ ವ್ಯಕ್ತಿ ತನ್ನ ಆಸೆ ಹಾಗೂ ಅಭಿಮಾನಗಳಿಗಿಂತ ಸಮಾಜದ ಸಮತೋಲನೆಯನ್ನು ಗಮನದಲ್ಲಿಟ್ಟಾಗ ಅಲ್ಲಿನ ವ್ಯವಸ್ಥೇ ಸುಸಂಬದ್ಧವಾಗಿರುವುದನ್ನು 'ಉಗ್ರಪ್ಪನ ಉಗಾದಿ'ಯಲ್ಲಿ ಕಾಣುತ್ತೇವೆ.

'ಜೋಗ್ಯೋರ ಅಂಜಪ್ಪನ ಕೋಳಿಕತೆ'ಯ ಅಂಜಪ್ಪ ಇದೇರೀತಿ ಮಾನವೀಯ ಸಂಬಂಧಗಳನ್ನು ಉಳಿಸುವ ಸಲುವಾಗಿ ತನ್ನದಲ್ಲದ ತಪ್ಪಿಗೆ ದಂಡ ತರುತ್ತಾನೆ. 'ಬೈಚೇಗೌಡ' ಕತೆಯ ಬೈಚೇಗೌಡ ಅನ್ಯಾಯದ ವಿರುದ್ಧ ಬಂಡೆದ್ದರೂ ಮಾನವೀಯ ಸಂಬಂಧಗಳನ್ನು ಉಳಿಸಿಕೊಳ್ಳುವುದಕ್ಕೋಸ್ಕರ ಅನ್ಯಾಯ ನಡೆಯುತ್ತಿದ್ದ ಜಾಗದಿಂದ ತಾನು ದೂರ ಉಳಿಯುತ್ತಾನೆ. ಅಂದರೆ ಈ ರೀತಿಯ ಪ್ರಸಂಗಗಳ ಮೂಲಕ ಒಂದು ಸಮಾಜ ಸಮತೋಲನ ಸ್ಥಿತಿಯಲ್ಲಿ ಉಳಿಯಲು ವ್ಯಕ್ತಿ ತನ್ನ ವೈಯಕ್ತಿಕ ಆಸೆ–ಆಮಿಷಗಳನ್ನು ಬಿಟ್ಟುಕೊಡುವುದು ಕಾರಣ ಆಗುವುದನ್ನು ಮಾಸ್ತಿ ತೋರಿಸುತ್ತಾರೆ.

ಹಾಗೆಯೇ ಮಾಸ್ತಿಯವರ ಇಡಿಯ ಕಥಾ ಸಾಹಿತ್ಯದ ಸಂದರ್ಭದಲ್ಲಿ ನೀತಿ ಹಾಗೂ ಭಾವುಕತೆ ಎದುರುಗೊಳ್ಳುತ್ತದೆ. ವ್ಯಕ್ತಿ–ವ್ಯಕ್ತಿಯ ಸಂಬಂಧದಲ್ಲಿ ವ್ಯಕ್ತಿಗೂ ಅವನ ಸಮಾಜಕ್ಕೂ ಇರುವ ಸಂಬಂಧದಲ್ಲಿ ಅವ್ಯವಸ್ಥೆ ಉಂಟಾಗಲು ಈ ನೀತಿಯನ್ನು ತಪ್ಪುವುದು ಕಾರಣವಾಗಿರುತ್ತದೆ. ಒಂದು ಸುಶಿಕ್ಷಿತ ಸಮಾಜದಲ್ಲಿ

ಜೀವಿಸುವ ಸಂದರ್ಭದಲ್ಲಿ ನೀತಿಯು ಪ್ರಮುಖವಾಗಿರುತ್ತದೆ. 'ವೆಂಕಟಿಗನ ಹೆಂಡತಿ' ಕತೆಯ ವೆಂಕಟಿಗ ನೀತಿಮೀರಿದ ಹೆಣ್ಣನ್ನು ಮಾನವೀಯತೆ ದೃಷ್ಟಿಯಿಂದ ಕ್ಷಮಿಸಿ ಬರಮಾಡುಕೊಳ್ಳುತ್ತಾನೆ.

ಆದರೆ ಆ ಹೆಣ್ಣಿಗೂ ನೀತಿ ಮೀರಿದ ಬಗೆಗೆ ತಾನು ಪಟ್ಟಿರುವ ಪಶ್ಚತ್ತಾಪ ಆ ತಪ್ಪಿಗೆ ಪ್ರಾಯಶ್ಚಿತ್ತವೆಂಬಂತಿರುತ್ತದೆ. 'ಬೈಚೇಗೌಡ' ಕತೆಯಲ್ಲಿಯೂ ಬೈಚೇಗೌಡ ಸತ್ಯವಂತ ಎನ್ನಿಸಿಕೊಂಡರೂ ಶಾನುಭೋಗನ ಹೆಂಡತಿ ರೋಗಸ್ಥೆಯಾದ ವಿಷಯ ತಿಳಿದಾಗ ಶಾನುಭೋಗ ಹೆಂಡತಿಯನ್ನು ನೋಡಲು ಕದ್ದು ಹೋಗುವುದಕ್ಕೆ ಅವಕಾಶ ಮಾಡಿಕೊಡುವ ಸಂದರ್ಭದಲ್ಲಿ ಮಾನವೀಯ ಅಂತಃಕರಣ ನೀತಿಯನ್ನು ಮೀರಲು ಬೈಚೇಗೌಡನನ್ನು ಪ್ರಚೋದಿಸುತ್ತದೆ. ಅಂತೆಯೇ 'ಬಾದಷಹನ ದಂಡನೆ' 'ಧರ್ಮಕಿಂಕರ ಫೀಟ್ಸ್ ಸ್ಟೀಫನ್' ನಂಥ ಕತೆಗಳ ಸಂದರ್ಭದಲ್ಲಿ ಒಂದು ಸಮಾಜದ ದೃಷ್ಟಿಯಲ್ಲಿ ತಮ್ಮ ಮಕ್ಕಳೇ ನೀತಿಯನ್ನು ಮೀರಿದಾಗ ಈ ಎರಡು ಕತೆಯ ನಾಯಕರೇ ತಮ್ಮ ಮಕ್ಕಳನ್ನು ಕೈಯಾರೆ ಕೊಲ್ಲುವ ನಿರ್ಧಾರಮಾಡುವ ಸನ್ನಿವೇಶ ಸಮಾಜದ ಹಿತದೃಷ್ಟಿಯನ್ನು ಅಲ್ಲಿನ ನೀತಿ–ನಿಯಮ ಕಾಪಾಡುವುದಾಗಿದೆ.

ಈ ಮೇಲಿನ ಅಂಶಗಳಷ್ಟೇ ಅಲ್ಲದೇ ಮಾಸ್ತಿಯವರ ಕಥೆಗಳಲ್ಲಿ ಅಲ್ಲಲ್ಲಿ ಸಾಮಾಜಿಕ ಘರ್ಷಣೆ ಹೇಗೆ ಭಿನ್ನವಿಸುತ್ತದೆ. ಮತ್ತು ಅದನ್ನು ಹೇಗೆ ನಿರ್ವಹಿಸುತ್ತಾರೆ, ಎಂಬಂತಹ ಅಂಶಗಳನ್ನು ಸಹ ಕಾಣಬಹುದು. ಮಾಸ್ತಿಯವರು ಯಾರ ಪರವಾಗಿ ಮಾತನಾಡುತ್ತಾರೋ, ಆ ಪಾತ್ರಗಳೆಲ್ಲ ಘರ್ಷಣಾತೀತ ಸ್ಥಿತಿಯಲ್ಲಿ ಬದುಕಿರುತ್ತಾರೆ. ಸಮಾಜಿಕ ಸಂದರ್ಭದ ಬಿಕ್ಕಟ್ಟುಗಳಲ್ಲಿ ಸಹಜವಾಗಿಯೇ ಹುಟ್ಟಿಕೊಳ್ಳಬಹುದಾದ ಘರ್ಷಣೆಯನ್ನು ಈ ನಾಯಕರು ತಮ್ಮ ತಾಳ್ಮೆ ಸಂಯಮ ಉದಾತ್ತ ಚರಿತ್ರೆಗಳಿಂದ ಮೀರಿಬಿಡುತ್ತಾರೆ. ಇದನ್ನೇ ಸ್ವಲ್ಪ ಬೇರೆ ರೀತಿಯಲ್ಲಿ ಹೇಳಬೇಕೆಂದರೆ 'ಸಾಮಾಜಿಕ ಸಂಘರ್ಷ' ಏರ್ಪಡುವ ಸಂದರ್ಭದಲ್ಲಿ ಮಾಸ್ತಿಯವರು ಅತ್ಯಂತ ಎಚ್ಚರದಿಂದ ಸಂಘರ್ಷಾತೀತ ಸ್ಥಿತಿಯನ್ನು ನಿರ್ಮಿಸಿಬಿಡುತ್ತಾರೆ.

ಈ ರೀತಿಯ ಸಾಮಾಜಿಕ ಘರ್ಷಣೆಯ ಸ್ಥಿತಿಯನ್ನು ಕೆಲವು ಉದಾಹರಣೆಗಳಿಂದ ಮತ್ತಷ್ಟು ಸ್ಪಷ್ಟಪಡಿಸಿಕೊಳ್ಳುಬಹುದು. 'ಮೊಸರಿನ ಮಂಗಮ್ಮ' ಕತೆಯಲ್ಲಿ ಮಂಗಮ್ಮ ಮೊಸರು ಮಾರುವ ಹೆಂಗಸು. ಆಕೆಗೂ ಅವಳ ಸೊಸೆಗೂ

ಭಿನ್ನಾಭಿಪ್ರಾಯ ಮೂಡಿ, ಅದು ಜಗಳದಲ್ಲಿ ಮುಕ್ತಾಯವಾಗುತ್ತದೆ. ಇಡೀ ಕತೆಗೆ ಸಾಕ್ಷಿಯಾಗಿರುವ ಮೊಸರು ತೆಗೆದುಕೊಳ್ಳುವ ಹೆಂಗಸು ಮಾತ್ರ 'ಮಂಗಮ್ಮ ಸರಿಯೋ, ಸೊಸೆ ಸರಿಯೋ' ಎಂದು ತೀರ್ಮಾನಿಸಲಾಗದೆ ಉಳಿದರೆ ಈ ಕತೆಯನ್ನು ನಿರೂಪಿಸುವಾತ ಇದೊಂದು ಕೊನೆಯ ಅಂಕ ಕಾಣದ ನಾಟಕ ಎಂದು ಕತೆಯನ್ನು ಕೊನೆಗಾಣಿಸುತ್ತಾನೆ.

ಅದರಂತೆಯೇ 'ವೆಂಕಟಿಗನ ಹೆಂಡತಿ' ಯಲ್ಲಿಯೂ ಬರುವಂತೆ ಬಿಕ್ಕಟ್ಟನ್ನು 'ಸಂಘರ್ಷರಹಿತ' ಸ್ಥಿತಿಗೆ ಎಳೆಯಲಾಗಿದೆ. ವೆಂಕಟಿಗನ ಹೆಂಡತಿ ಸಾಹುಕಾರನ ಜೊತೆ ಹೊರಟು ಬಿಟ್ಟಾಗ ವೆಂಕಟಿಗ ಅಪಾರವಾದ ಸಂಯಮ, ತಾಳ್ಮೆ, ಸಹನ ಶೀಲತೆಯಿಂದ ನಡೆದುಕೊಳ್ಳುತ್ತಾನೆ. ತನ್ನ ಹೆಂಡತಿ ಬೇರೆಯವನೊಂದಿಗೆ ಓಡಿ ಹೋದಾಗ, ಓಡಿ ಹೋದವಳು ಮಗುವಿನೊಂದಿಗೆ ಹಿಂದಿರುಗಿದಾಗ ಉಂಟಾಗಬಹುದಾದ ಬಿಕ್ಕಟ್ಟಿನ ಗಳಿಗೆಗಳನ್ನು ಕತೆಯಲ್ಲಿ ಸುಲಭವಾಗಿ ಪರಿಹರಿಸಲಾಗಿದೆ. ಅವನು ಅಂತಹ ಸಂದರ್ಭದಲ್ಲಿ ಉದಾತ್ತವಾಗಿ ವರ್ತಿಸಿ ಘರ್ಷಣೆಗೆ ಅವಕಾಶವಿಲ್ಲದಂತೆ ಮಾಡುತ್ತಾನೆ.

'ವೆಂಕಟಶಾಮಿಯ ಪ್ರಣಯ' ದಲ್ಲಿ ಹೆಸರೇ ಹೇಳುವಂತೆ ಪ್ರೇಮದ ಕತೆ ನಾಯಿಂದರ ಹುಡುಗ, ಡೊಂಬರ ಹುಡುಗಿಯನ್ನು ಪ್ರೇಮಿಸುತ್ತಾನೆ. ಜಾತಿ ಮತ್ತು ಪ್ರೇಮ ಭಾರತೀಯ ಸಮಾಜದಲ್ಲಿ ಉಂಟುಮಾಡುವ ಬಿಕ್ಕಟ್ಟುಗಳು ಬಹುತರವಾದುದು. ಆದರೆ ಮಾಸ್ತಿಯವರು ಒಂದೆರಡು ಮಾತುಗಳಲ್ಲಿ ಅದನ್ನು ಮುಗಿಸಿಬಿಡುತ್ತಾರೆ. ಕೊನೆಗೆ ಅಂತರ್ಜಾತಿಯ ಮದುವೆ ತಂದೊಡ್ಡಬಹುದಾದ ಬಿಕ್ಕಟ್ಟುಗಳೆಲ್ಲ ವೆಂಕಟಶಾಮಿಯ ಮರಣದಿಂದ ನಿವಾರಣೆ ಆಗುತ್ತವೆ. ವೆಂಕಟಶಾಮಿಯ ಪರವಾಗಿ ಓದುಗರ ಎದೆ ಕರಗುತ್ತದೆ. ಜೊತೆಗೆ ಮಾಸ್ತಿಯವರ ಉದ್ದೇಶವೂ ಅದೇ ಆಗಿದೆ.

'ಚೆನ್ನಮ್ಮ' ಕತೆಯಲ್ಲಿಯೂ ಗಂಡ ವ್ಯಭಿಚಾರಿ. ಆತ ಹೆಂಡತಿಯ ಮೇಲೂ ವ್ಯಭಿಚಾರದ ಆರೋಪ ಹೊರಿಸುತ್ತಾನೆ. ಒಂದು ಹಂತದಲ್ಲಿ ಹೆಂಡತಿಯನ್ನೇ ವ್ಯಭಿಚಾರಕ್ಕೆ ಪ್ರಚೋದಿಸುತ್ತಾನೆ. ಮುಂದೆ ಚೆನ್ನಮ್ಮ ಜೈಲು ಸೇರುತ್ತಾಳೆ. ಜೈಲಿನಿಂದ ಬಂದ ಆಕೆ ತವರಿಗೆ ಹಿಂದಿರುಗುತ್ತಾಳೆ. ಇದೀಗ ಮತ್ತೆ ಬಿಕ್ಕಟ್ಟಿನ

ಸಂದರ್ಭ, ಗಂಡ ಇರುತ್ತಲೆ ಹೆಂಡತಿ ತವರಿನಲ್ಲಿ ಇರುವುದು ಹೇಗೆ ಸಾಧ್ಯ? ಕಥೆಯಲ್ಲಿ ಚೆನ್ನಮ್ಮನ ಗಂಡ ರಾಮಪ್ಪ ಸಾಯುವುದರ ಮೂಲಕ ಸಮಸ್ಯೆ ಪರಿಹಾರವಾಗಿ ಕತೆ ಸಂಘರ್ಷಾತೀತವಾಗುತ್ತದೆ.

ಇಷ್ಟೇ ಅಲ್ಲದೇ ಮತ್ತೊಂದು ಸಮಾಜಿಕ ಕತೆಯಾದ 'ಪಕ್ಷಿಜಾತಿ' ಕತೆಯಲ್ಲಿ ಅಣ್ಣ–ತಂಗಿ ಸಂಭೋಗಿಸುತ್ತಾರೆ. ಅದು ಊರಿಡೀ ಸುದ್ದಿಯಾಗುತ್ತದೆ. ನೈತಿಕ ಅವನತಿಯ ಸಂದರ್ಭದ ಬಿಕ್ಕಟ್ಟುಗಳೆಲ್ಲ ತಂಗಿಯ ಗಂಡ ಮಂಚ ಊರು ಬಿಡುವಲ್ಲಿ ಸ್ವಲ್ಪ ಶಮನವಾಗುತ್ತದೆ. ಊರಿನಲ್ಲಿ ಪಂಚಾಯಿತಿ ನಡೆಯುತ್ತದೆ. ಅಣ್ಣ–ತಂಗಿ ತಪ್ಪು ಒಪ್ಪಿಕೊಳ್ಳುತ್ತಾರೆ. ಮಂಚನಲ್ಲಿ ಕ್ಷಮೆಯಾಚಿಸುವ ಮೂಲಕ ಸಂಘರ್ಷ ರಹಿತ ಸ್ಥಿತಿಯಲ್ಲಿ ಕತೆ ಮುಗಿಯುತ್ತದೆ. ಹೀಗೆ ಮಾಸ್ತಿಯವರು ತುಂಬ ಸೂಕ್ಷ್ಮವಾಗಿ ಸಾಮಾಜಿಕ ಘರ್ಷಣೆಯನ್ನು ನಿರ್ವಹಿಸಿದ್ದಾರೆ.

ಮುಂದಿನ ಭಾಗದಲ್ಲಿ ಮಾಸ್ತಿಯವರು ಭಾರತಕ್ಕೆ ಬ್ರಿಟೀಷರ ಆಗಮನದಿಂದಾಗಿ ಇಲ್ಲಿ ಉಂಟಾದ ಪರಿಸ್ಥಿತಿ ಮತ್ತು ನಮ್ಮ ಸಂಸ್ಕೃತಿಯ ಮೇಲೆ ಉಂಟಾದ ಪರಿಣಾಮ ಮತ್ತಿತರ ಅಂಶಗಳನ್ನು ತಮ್ಮ ಕತೆಗಳ ಮೂಲಕ ತಿಳಿಸಿಕೊಟ್ಟಿದ್ದಾರೆ. 'ರಂಗಪ್ಪನ' ಕತೆಗಳಲ್ಲಿ ಬ್ರಿಟೀಷರ ಸಂಸ್ಕೃತಿಯ ಪ್ರಭಾವದಿಂದ ಉಂಟಾದ ಬದಲಾವಣೆಗಳ ಪ್ರಸ್ತಾಪವಿದೆ. 'ಮಸುಮತಿ' ಹಾಗೂ 'ರಂಗನ ಹಳ್ಳಿಯ ರಾಮ' ಕತೆಗಳನ್ನು ಸಾಂಸ್ಕೃತಿಕ ಮುಖದ ಪ್ರಸ್ತಾಪವಿದೆ. ಅದನ್ನು ಬಿಟ್ಟರೆ ಅವರ ಎರಡು ಐತಿಹಾಸಿಕ ಕಾದಂಬರಿಗಳನ್ನು ಬ್ರಿಟೀಷರ ರಾಜಕೀಯ ತಂತ್ರಗಳು ಸೂಕ್ಷ್ಮವಾಗಿ ನಿರೂಪಣೆಯಲ್ಲಿ ಕಂಡುಬರುತ್ತವೆ. ಅಲ್ಲದೇ 'ಸೋರಲಿ ಪ್ರಸಂಗ' ಹಾಗೂ 'ಆಂಗ್ಲ ನೌಕಾ ಕ್ಯಾಪ್ಟನ್' ನಲ್ಲಿ ಭಾರತದಲ್ಲಿದ್ದ ಬ್ರಿಟೀಷರ ಜೀವನ ಚರಿತ್ರೆ ಕಾಣುತ್ತೇವೆ.

ಮಾಸ್ತಿಯವರ ಕತೆಯಲ್ಲಿನ ನೋಟ ಒಂದು ಕ್ಷೇತ್ರಕ್ಕೆ ಸೀಮಿತವಾಗಿರದೆ ಹಿಂದಿನ ಹಲವಾರು ಅಂಶಗಳ ಜೊತೆಗೆ ಇವರು ಮತಧರ್ಮ ಧೋರಣೆಯನ್ನು ಕುರಿತಂತೆ ತಿಳಿಸಿರುವುದು ಕಾಣಬಹುದು. ಆದರೆ, ಕ್ರೈಸ್ತರು ಹಿಂದುಗಳನ್ನು ಮತಾಂತರಿಸುವುದನ್ನು ಹಾಗೂ ಈ ಧರ್ಮವನ್ನು ಕೀಳಾಗಿ ಕಾಣುತ್ತಿದ್ದುದ್ದನ್ನು ಸಹಿಸುತ್ತಿರಲಿಲ್ಲ. 'ಇಲ್ಲಿಯ ತೀರ್ಪು' ಕತೆಯಲ್ಲಿ ಅದನ್ನು ಕಾಣಬಹುದು. ಅದು

ತನ್ನ ಧಾರ್ಮಿಕ ಪ್ರಚಾರದಿಂದ ಪಾದ್ರಿ ಭಾರತದ ವ್ಯವಸ್ಥಿತವಾದ ಜನಜೀವನವನ್ನು ಹಾಳು ಮಾಡುತ್ತಿದ್ದಂತೆ ಆ ಕತೆ ಚಿತ್ರಿಸುತ್ತದೆ. ಈ ರೀತಿಯಾಗಿ ಮಾಸ್ತಿಯವರ ಕತೆಯಲ್ಲಿನ ದನಿ ಕ್ರೈಸ್ತಮತದ ಪ್ರಚಾರವನ್ನು ವಿರೋಧಿಸುವಂತೆ ಕಾಣುತ್ತದೆ. ಅಂದಮಾತ್ರಕ್ಕೆ ಆ ಧರ್ಮದ ವಿರೋಧಿ ಇವರು ಎಂದು ಭಾವಿಸುವಂತಿಲ್ಲ.

ಕೊನೆಯದಾಗಿ ಹೇಳಬೇಕೆಂದರೆ ಈ ರೀತಿಯಾದ ಮಾಸ್ತಿಯವರ ಕತೆಯನ್ನು ಹಂತಹಂತವಾಗಿ ಬಹಳ ಸೂಕ್ಷ್ಮವಾಗಿ ನೋಡತೊಡಗಿದಾಗ ಮಾಸ್ತಿಯವರ ಕಥಾ ಸಾಹಿತ್ಯದ ವಿಸ್ತೀರ್ಣತೆ ಎಲ್ಲ ಕ್ಷೇತ್ರದಲ್ಲಿಯೂ ಹರಡಿಕೊಂಡಿರುವುದನ್ನು ಕಾಣಬಹುದು. ಆದುದರಿಂದಲೆ ಮಾಸ್ತಿಯವರು ಮೂಲಭೂತವಾಗಿ ನಮ್ಮ ಸಂಸ್ಕೃತಿಯ ಮೌಲ್ಯಗಳನ್ನು ಪ್ರಶ್ನಿಸದೆ ಅಂತಹ ಸಂದರ್ಭಗಳನ್ನು ನಿವಾರಿಸುತ್ತಾರೆ. ಮಾನವನ ಸಮಸ್ಯೆಗೆ ಪರಿಹಾರ ಸಾಧ್ಯವಿದೆ. ಎನ್ನುವುದನ್ನು ಇವರು ತಮ್ಮ ಎಲ್ಲ ಕಥೆಯಲ್ಲಿಯೂ ತೋರಿಸುತ್ತಾರೆ. ಮನುಷ್ಯನಿಗೆ ಹುಟ್ಟುವ ಸಮಸ್ಯೆಗೆ ಮನುಷ್ಯ ಹಾಗೂ ವಿಧಿ ಇಬ್ಬರೂ ಕಾರಣವಾಗುತ್ತಾರೆ ಎಂದು ಮಾಸ್ತಿ ಚಿತ್ರಿಸುತ್ತಾರೆ.

ಹೀಗೆ ಮಾಸ್ತಿಯವರ ಕತೆಗಳ ಸಮಗ್ರತೆಯತ್ತ ನೋಟ ಹರಿಸಿದಾಗ ಮಾಸ್ತಿಯವರ ನೂರು ಕತೆಗಳ ನೂರಾರು ಪಾತ್ರಗಳು, ಬದುಕಿನ ಅನಂತ ಮುಖಗಳನ್ನು ಅವುಗಳ ಸ್ವಭಾವ, ವೈಚಿತ್ರ್ಯಗಳನ್ನೂ ಹೃದಯ ಸ್ಪರ್ಶಿಯಾಗುವಂತೆ ಅವರು ನಿರೂಪಿಸಿರುವುದು ಕಂಡು ಬರುತ್ತದೆ. ಅಲ್ಲದೆ ನೂರು ಕತೆಗಳನ್ನು ಒಟ್ಟಿಗೆ ಓದಿದಾಗ ಒಬ್ಬರೇ ವ್ಯಕ್ತಿ ಇಷ್ಟೆಲ್ಲಾ ಬಗೆಯ ಕತೆಗಳನ್ನು ಬರೆದರೆಂದು ನಂಬುವುದೇ ಕಷ್ಟ ಆಗುತ್ತದೆ. ಆದರೂ ಮಾಸ್ತಿಯವರ ಕಥಾಸಾಹಿತ್ಯವನ್ನು ಪ್ರವೇಶಿಸಲು ಅನುಕೂಲ ಆಗುವಂತಹ ಒಂದು ರೂಪುರೇಷೆಯನ್ನಷ್ಟೆ ರಚಿಸಲು ಇಲ್ಲಿ ಪ್ರಯತ್ನಿಸಿದ್ದೇನೆ.

# ಉಪ ಸಂಹಾರ

'ನಾನು ಬೆಳೆಯುವ ತಮ್ಮ
ನೀನು ಬೆಳೆದಣ್ಣ'

ಎಂಬ ಬೇಂದ್ರೆಯವರ ಮಾತು ಮಾಸ್ತಿಯವರು ಸಾಹಿತ್ಯ ಕ್ಷೇತ್ರದಲ್ಲಿ ಏರಿರುವ ಎತ್ತರಕ್ಕೆ ಸಾಕ್ಷಿ. ಮಾಸ್ತಿಯವರ ಜೀವನವೇ ಸಾಹಿತ್ಯ. ಅವರ ಸಾಹಿತ್ಯವು ಅವರ ಶ್ರೇಷ್ಠ ಜೀವನದ ಶ್ರೇಷ್ಠ ಪ್ರತಿಫಲ. ಅವರ ಜೀವನದ ಕನ್ನಡಿಯಲ್ಲಿ ಸಾಹಿತ್ಯದ ಪ್ರತಿಬಿಂಬ ಕಾಣಿಸುತ್ತದೆ. ಅಂತೆಯೇ ಅವರ ಸಾಹಿತ್ಯದಲ್ಲಿ ಜೀವನದ ಝೇಂಕಾರ ಪಕ್ವಪಡೆಯುವುದನ್ನು ಕಾಣಬಹುದು.

ಕನ್ನಡ ಕಾವ್ಯ ಪ್ರಪಂಚದಲ್ಲಿ ಆದಿ ಕವಿ ಪಂಪ ಹೇಗೋ, ಕನ್ನಡ ಕಥಾ ಕ್ಷೇತ್ರದಲ್ಲಿ ಶ್ರೀನಿವಾಸರು ಹಾಗೆ. ಕನ್ನಡ ಸಾಹಿತ್ಯ ಇತಿಹಾಸದಲ್ಲಿ ಮಾಸ್ತಿಯವರಿಗಿರುವ ಸ್ಥಾನವನ್ನು ಮೇಲಿನ ಬೇಂದ್ರೆ ನುಡಿಗಿಂತಲೂ ಹೆಚ್ಚು ಪರಿಣಾಮಕಾರಿಯಾಗಿ ಗುರುತಿಸುವುದು ಆಗದ ಮಾತೆನ್ನಬಹುದು. ಮಾಸ್ತಿ ಈ ಶತಮಾನದ ಆರಂಭದಿಂದಲೇ ಸಾಹಿತ್ಯ ರಚನೆಗೆ ತೊಡಗಿದಂತವರು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಗೋವಿಂದ ಪೈ ಮತ್ತು ಪಂಜೆ ಮಂಗೇಶರಾಯರಂತಹ ಹಿರಿಯರ ಹೆಸರು ಕೇಳಿ ಬರುವಂತೆ ಅಂದಿನ ಮೈಸೂರು ರಾಜ್ಯದಲ್ಲಿ ಕನ್ನಡಕ್ಕಾಗಿ ಶ್ರಮಿಸಿದ ಹಿರಿಯರಲ್ಲಿ ಮಾಸ್ತಿ ಪ್ರಮುಖರಾಗಿದ್ದರೆಂಬುದನ್ನು ಮರೆಯಬಾರದು.

ನವೋದಯ ಸಂದರ್ಭದಲ್ಲಿ ಮಾಸ್ತಿಯವರಂತೆ ಕುವೆಂಪು, ಬೇಂದ್ರೆ, ಕಾರಂತರವರು ಸಾಹಿತ್ಯ ರಚನೆಯಲ್ಲಿ ತೊಡಗಿದವರು. ಇವರೆಲ್ಲರ ಸಾಹಿತ್ಯಗಳಲ್ಲಿ ಆ ಕಾಲಘಟ್ಟದ ಲಕ್ಷಣಗಳಾದ ಆಧ್ಯಾತ್ಮಿಕತೆ, ವಿಧಿ, ಪ್ರಕೃತಿ ಪ್ರೇಮ, ರಮ್ಯತೆಗಳನ್ನು ಪ್ರಮುಖವಾಗಿ ಗುರುತಿಸಬಹುದಾದರೂ, ಮಾಸ್ತಿಯವರಲ್ಲಿ ದೈವ, ವಿಧಿ, ಮಾನವೀಯತೆಗಳು ಪ್ರಮುಖ ಪಾತ್ರ ವಹಿಸುತ್ತವೆ ಎನ್ನಬಹುದು. ನಮ್ಮ

ಸಂಸ್ಕೃತಿಯೆಂಬುದು ಹಳೆಯ ಕಾಸಿನಸರ ಇದ್ದ ಹಾಗೆ. ಅದನ್ನು ಇಂದಿಗೆ ತಕ್ಕಂತೆ ಮಾರ್ಪಡಿಸಿ necles ಮಾಡಬೇಕೆ ಹೊರತು ಬಿಸುಡಬಾರದು ಎಂದು ಹೇಳುವ ಮೂಲಕ ಪಾರಂಪರಿಕ ಅನೇಕ ಮೌಲ್ಯಗಳನ್ನು ಸಮಕಾಲೀನಗೊಳಿಸಬಹುದು ಎಂದು ತಿಳಿಸದಂತವರು. ಇವರ ವಿಚಾರಧಾರೆಗಳು ಮುಂದಿನ ನವ್ಯದವರಿಗೆ ರಾಶಿ–ರಾಶಿ ಅನುಭವಗಳನ್ನು ಒದಗಿಸಿತು.

ನಾನು ನಿಬಂಧ ರಚನೆಗೆ ಮಾಸ್ತಿಯವರ ಕಥೆಗಳನ್ನು ಆಯ್ಕೆಮಾಡಿಕೊಂಡು ಅಲ್ಲಿನ ವಸ್ತು ಮತ್ತು ಪಾತ್ರಗಳನ್ನು ಅಭ್ಯಸಿಸಲು ಹೊರಟ' ಆಗ ನನಗೆ ತೊಡಕು ಅಡ್ಡಿಗಳು ಎದುರಾದವು. ಒಂದೊಂದು ಕಥೆಯು ಮಹತ್ವ ಮತ್ತು ಬೃಹತ್ತಿನಿಂದ ಕೂಡಿದಂತವುಗಳಾಗಿವೆ. ಮಾಸ್ತಿ ಕತೆಗಳಲ್ಲಿನ ವೈವಿಧ್ಯ ಮುಖಗಳನ್ನು ಒಂದೊಂದಾಗಿ ಅಭ್ಯಾಸ ಮಾಡಬಹುದು. (ಉದಾ : ಮಾಸ್ತಿ ಕತೆಗಳಲ್ಲಿನ ಸಾಮಾಜಿಕ, ಸಾಂಸ್ಕೃತಿಕ, ಚಾರಿತ್ರಿಕ ಮತ್ತು ಪೌರಾಣಿಕ ಪ್ರಜ್ಞೆ ಮೊದಲಾದವು ) ನಾನು ಮಾಸ್ತಿ ಕತೆಗಳಲ್ಲಿ ಸಾಮಾಜಿಕ, ಐತಿಹಾಸಿಕ, ಮತ್ತು ಪೌರಾಣಿಕ ಪ್ರಜ್ಞೆಗಳನ್ನು ಒಟ್ಟಿಗೆ ಅಭ್ಯಾಸಕ್ಕೆ ಒಳಪಡಿಸಿದರೂ ಮಾಸ್ತಿ ಕತೆಗಳ ಸಮಾಜಿಕ ವಾತಾರವಣ ಸಮಾಜದ ಕತೆಗಳಲ್ಲಿನ ಪಾತ್ರಗಳ ತುಡಿತವನ್ನು ಪ್ರಮುಖವಾಗಿ ಅಧ್ಯಯನಕ್ಕೆ ತೆಗೆದುಕೊಂಡಿದೇನೆ.

ಪ್ರಸ್ತುತ ನಾನು ಆಯ್ದುಕೊಂಡಿರುವ ವಿಷಯ ಒಂದು ಮಹಾ ಪ್ರಬಂಧದ ರಚನೆಗೆ ವಸ್ತುವಾಗಬಹುದಾದ್ದು. ಆ ನಂತರದಲ್ಲಿ ನನಗೆ ಅನಿಸಿತು ಈ ಕತೆಗಳಲ್ಲಿನ ಒಂದು ಬಗೆಯ ವಸ್ತು ಹಾಗೂ ಆ ಹಿನ್ನಲೆಯಲ್ಲಿನ ಪಾತ್ರಗಳನ್ನು ಆಯ್ಕೆಮಾಡಿಕೊಂಡರೆ ಸರಿಯಿರುತ್ತಿತ್ತೇನೋ ಎಂದು. ಸಾವಿರಾರು ಪುಟಕ್ಕಿಂತಲೂ ಅಧಿಕವಾಗಿರುವ ಈ ಕತೆಗಳನ್ನು ಕೇವಲ ೮೦ ಪುಟಗಳ ನಿಬಂಧ ರಚನೆಯಲ್ಲಿ ಇಳಿಸುವುದು ಎಷ್ಟು ಕಷ್ಟ ಸಾಧ್ಯವಾದರೂ ಕೂಡ ಅದು

ಸಮಗ್ರವಿರುತ್ತದೆಯೇ ಎಂಬ ಪ್ರಶ್ನೆಗಳು ನನಗೆ ಕಾಡಿವೆ. ಆದರೂ ನಾನು ನನ್ನ ಸಾಮರ್ಥ್ಯಕ್ಕೆ ತಕ್ಕಂತೆ ನನ್ನ ವಿಷಯಕ್ಕೆ ನ್ಯಾಯ ಒದಗಿಸಿದ್ದೇನೆ.

ಮಾಸ್ತಿಯವರೆ ಸುಬ್ಬಣ್ಣ ಎಂಬ ನೀಳ್ಗತೆಯನ್ನು ಕುರಿತು ಹೇಳುತ್ತಾ ನಾನು ಈ ಕತೆಗಳಿಗೆ ನ್ಯಾಯ ದೊರಕಿಸಿಕೊಟ್ಟಿದ್ದೇನೆಂದು ಸಂಪೂರ್ಣವಾಗಿ ಹೇಳಲಾರೆ ಎಂದಿರುವುದರಿಂದ ಇಲ್ಲಿನ ಕಥೆಗಳ ವಸ್ತು-ಪಾತ್ರಗಳನ್ನು ಕೆಲವು ಪುಟಗಳಲ್ಲಿ ತಿಳಿಸಲು ಹೊರಟಿರುವ ನಾನು ಕೂಡ ಅದಕ್ಕಿಂತ ಬೇರೆಯ ರೀತಿಯಲ್ಲಿ ಹೇಳಬೇಕಿಲ್ಲ ಎನಿಸುತ್ತದೆ.

ಮಾಸ್ತಿಯವರು ಮೊದಲು ಕತೆಯನ್ನು ಬರೆದು ಪ್ರಕಟಿಸಿದಾಗ ಅಂದರೆ' ರಂಗಪ್ಪನ ಕತೆಯನ್ನು ಬರೆಯಲು ಆರಂಭಿಸಿ ಪ್ರಕಟಣೆಗೊಂಡಾಗ ವಿವಿಧ ರೀತಿಯಲ್ಲಿ ಮೂದಲಿಸಿದವರೂ ಉಂಟು. ಇದಕ್ಕೆ ಮಾಸ್ತಿಯವರೆ ಮುನ್ನುಡಿಯನ್ನು ಹೀಗೆ ಹೇಳುತ್ತಾರೆ. “ಇದೇನು ಸಣ್ಣ ಕತ್ತೆ ಬಂತಪ್ಪ” ಎಂದವರುಂಟು. “ಮಧುರ ವಾಣಿಯಲ್ಲಿ ಯಾರೋ ಒಂದು ಕತೆಯಂತೆ, ಕತೆ, ಕತೆಯನ್ನು ಬರೆದಿದ್ದಾರೆ. ಅದರ ಹೆಸರು ‘ರಂಗಪ್ಪನ ದೀಪಾವಳಿ’ ಇನ್ನು ನಾಳೆ ನಾನು ಕೂತು ‘ಉಗ್ರಪ್ಪನ ಉಗಾದಿ’ ಎಂದು ಕತೆಯನ್ನು ಬರೆಯಬೇಕೆಂದಿದ್ದೇನೆ. ಆಹಾ, ಏನು ಹೇಳಬೇಕೋ!” ಎಂದು ಮೂದಲಿಸಿದವರೂ ಉಂಟು. ಸುದೈವದಿಂದ ಮಾಸ್ತಿಯವರು ಇಂಥ ಮಾತುಗಳನ್ನು ಕೇಳಿ ಎದೆಗುಂದಲಿಲ್ಲ ಎಂದಿದ್ದಾರೆ. ಇದನ್ನು ಗಮನಿಸಿ ಕತೆಯನ್ನು ಓದಿದಾಗ ಈ ಮಾತುಗಳು ಪೂರ್ವಗ್ರಹ ಅಷ್ಟೇ. ‘ಉಗ್ರಪ್ಪನ ಉಗಾದಿ’ ಎನ್ನುವ ನೀವು ಉಗ್ರಪ್ಪನ ಉಗಾದಿಯನ್ನು ಬರೆದು ಅಚ್ಚು ಹಾಕಿಸಿ; ನಾನು ಓದಿ ಸಂತೋಷ ಪಡುತ್ತೇನೆ ಎಂದಿದ್ದಾರೆ. ಹಾಗಾಗಿ ಮುಂದೆ ಈ ಕತೆಯನ್ನು ಅಧ್ಯಯನಕ್ಕೆ ತೆಗೆದುಕೊಳ್ಳುವವರು ಬೇರೆಯದೇ ಆದ ರೀತಿಯಲ್ಲಿ ತಮ್ಮ ಅಭಿಪ್ರಾಯ ಮಂಡಿಸಬಹುದು.

'ನಮ್ಮ ಮೇಷ್ಟ್ರು' ಎಂಬ ಕತೆಯಲ್ಲಿ ಸ್ತ್ರೀಯನ್ನು ಪ್ರಧಾನವಾಗಿಸಿದ್ದಾರೆ. ಸ್ತ್ರೀಯ ಪ್ರಾಧಾನ್ಯತೆಯನ್ನು ಹೆಚ್ಚಿಸಿ ಆ ಮೂಲಕ ಪುರುಷನ ಪರಿಚಯ ಮಾಡಿಸುವುದು ಮಾಸ್ತಿಯವರ ಮಾರ್ಗ. ಇದನ್ನು ಅವರ ಇತರ ಕತೆಗಳಲ್ಲಿ ನೋಡಬಹುದು. ಬಹುಶಃ ಸ್ತ್ರೀಯು ತುಳಿಯಲ್ಪಟ್ಟವಳೆಂಬ ಕಾರಣದಿಂದಲೋ ಏನೋ ಅವರ ಆದರವು ಯಾವಾಗಲೂ ಸ್ತ್ರೀಯರ ಕಡೆಗೇ ಇದೆ. ಒಂದು ಕುಟುಂಬಕ್ಕೆ ಸೀಮಿತವಾದ ಮೇಷ್ಟ್ರ ಹೆಂಡತಿ ಪಾತ್ರವನ್ನು ತೆಗೆದುಕೊಂಡು ಕತೆಯನ್ನು ಬರೆಯುವ ಅಗತ್ಯ ಮಾಸ್ತಿಯವರಿಗೇನಿತ್ತು ಎಂಬ ವಿಚಾರ ನನಗೆ ಹೊಳೆದು, ಬಹುಶಃ ಅವರು ಈ ಕತೆಯಲ್ಲಿ ಬರುವ ಮೇಷ್ಟ್ರರ ಹೆಂಡತಿಯಂತಹ ದಿಟ್ಟ ಮಹಿಳೆಯನ್ನು ಸೃಷ್ಟಿಸಿ ಒಂದು ಮಾದರಿಯಾಗುವಂತೆ ಆಕೆಯ ಪಾತ್ರ ರಚನೆಯನ್ನು ಮಾಡಿ ಈ ಕತೆಗೆ ಬಳುವಳಿಯಾಗಿ ನೀಡಿದ್ದಾರೆನಿಸುತ್ತದೆ.

ಸಾಮಾಜಿಕ ಕತೆಗಳನ್ನು ಕುರಿತು ಅಧ್ಯಯನಕ್ಕೆ ತೊಡಗಿದಾಗ ನನಗೆ ಕೌಟುಂಬಿಕ ಘರ್ಷಣೆಯ ಹಿನ್ನಲೆಯನ್ನು ಒಳಗೊಂಡ ಕತೆಯಾದ 'ಮೊಸರಿನ ಮಂಗಮ್ಮ' ಕತೆಯು ಹೆಚ್ಚು ಇಷ್ಟವಾಯಿತು. ಓದಿಸಿಕೊಂಡು ಹೋಗುವಂತೆ ವಸ್ತುವನ್ನು ಒಳಗೊಂಡ ಇದು ಓದುಗರನ್ನು ಚಿಂತನೆಗೆ ಒಳಪಡಿಸುತ್ತದೆ. ಮಂಗಮ್ಮ ಮೊಸರು ಮಾರುವ ಹೆಂಗಸು ಆಕೆಗೂ ಅವಳ ಸೊಸೆಗೂ ಬಿನ್ನಾಭಿಪ್ರಾಯ ಮಾಡಿ ಅದು ಜಗಳದಲ್ಲಿ ಮುಕ್ತಾಯ ಆಗುತ್ತದೆ. ಮಂಗಮ್ಮ ಮನೆಯಿಂದ ಹೊರ ನಡೆಯುವ ತೀರ್ಮಾನ ಕೈಗೊಳ್ಳುತ್ತಾಳೆ ಪ್ರತ್ಯೇಕವಾಗಿ ವಾಸಿಸುತ್ತಾಳೆ. 'ಹೆಂಗಸು ಒಂಟಿ ಆದಳು ಎಂದರೆ ಜನ ಅವಳ ಮೇಲೆ ಕಣ್ಣು ಹಾಕುವ' ವಿವರವೂ ಈ ಕತೆಯಲ್ಲಿ ಬರುತ್ತದೆ. ಈ ಮಧ್ಯೆ ಮಗುವಿನ ಕಾರಣದಿಂದ ಮತ್ತೆ ಅತ್ತೆ ಸೊಸೆ ಸೇರುತ್ತಾರೆ. ಇದರಿಂದಲೇ ಏನೋ ಈ ಕತೆಯು ತುಂಬು ಕುಟುಂಬದ ಸಂಸಾರಸ್ಥರು ತಮ್ಮ ಜೀವನಕ್ಕೆ ಮಾದರಿಯಾಗಿ ಇಟ್ಟುಕೊಂಡು ಸಹಬಾಳ್ವೆ ನಡೆಸುವ ಸಲುವಾಗಿ ಈ ಕತೆ ಓದುಗರನ್ನು ಮತ್ತು ವಿಮರ್ಶಕರನ್ನು ತನ್ನತ್ತ ಸೆಳೆದುಕೊಂಡಿದೆ.

ಇದೇ ಸಂದರ್ಭದಲ್ಲಿ ಚಾರಿತ್ರಿಕ ಕತೆಗಳಲ್ಲಿ ಒಂದಾದ 'ನಿಜಗಲ್ಲಿನ ರಾಣಿ' ಯಲ್ಲಿ ಗಿರಿಜವ್ವೆಯ ಪಾತ್ರ ಪ್ರಸ್ತುತ ನಮ್ಮ ಆಧುನಿಕ ಸ್ತ್ರೀ ಜಗತ್ತಿಗೆ ಒಂದು ಮಾದರಿಯಾಗಿ ಪ್ರಸ್ತುತ ಸನ್ನಿವೇಶಕ್ಕೆ ಸವಾಲಾಗಿ ಇರುವಂತದ್ದು. ಅಲ್ಲಿನ ಮುಖ್ಯ ವಸ್ತುವಾದ ಸ್ತ್ರೀಯ ಪಾತಿವ್ರತ್ಯ ಎಂತಹದು ಅದು ಇಂದಿನ ಕಾಲಕ್ಕೆ ಎಂತಹ ಉದಾತ್ತವಾದ ಮೌಲ್ಯವನ್ನು ಎತ್ತಿ ಹಿಡಿಯುವಂತಹ ರೀತಿಯಲ್ಲಿದೆ ಈ ರೀತಿಯ ಆದರ್ಶ ಸ್ತ್ರೀಯರನ್ನು ಕುರಿತಾದ ಈ ಕತೆ ಚರಿತ್ರೆಯಾದರೂ ಸಹ ಇಂದಿಗೂ ಅನ್ವಯಿಸುವಂತಹ ಅಂಶವನ್ನು ಒಳಗೊಂಡಿರುವುದರಿಂದ ಈ ರೀತಿ ಕತೆಯನ್ನು ಅಧ್ಯಯನ ಮಾಡಿ ವಸ್ತುವನ್ನು ಎತ್ತಿ ಹಿಡಿಯಲು ಪ್ರೇರೇಪಿಸಿತು.

ಅಂತೆಯೇ ಈ ಮಾಸ್ತಿಯವರ ಕಥೆಯ ಅಧ್ಯಯನದ ಸಂದರ್ಭದಲ್ಲಿ ಪೌರಾಣಿಕ ವಸ್ತುಗಳನ್ನು ನಾನು ಆಯ್ಕೆ ಮಾಡಿಕೊಳ್ಳಲು ಕಾರಣವೇನೆಂದರೆ ಈ ಹಿಂದಿನ ಸಾಮಾಜಿಕ ಮತ್ತು ಐತಿಹಾಸಿಕ ಕತೆಗಳಲ್ಲಿ ನಿರ್ಧಿಷ್ಟವಾಗಿ ಸೇರಿಸಲಾಗದ ಕತೆಗಳನ್ನು ಈ ಭಾಗದಲ್ಲಿ ಗಮನಿಸಿದ್ದೇನೆ. ಇಲ್ಲಿ ಮಾಸ್ತಿಯವರು ಪುರಾತನ ಸಾಹಿತ್ಯದಿಂದ ಪ್ರೇರಣೆ ಪಡೆದು ರಚಿಸಿರುವ ಕತೆಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡು ಬರುತ್ತದೆ. ಮಹಾಭಾರತ, ರಾಮಾಯಣ, ಭಾಗವತದಂತಹ ಪೌರಾಣಿಕ ಕಾವ್ಯಗಳ ವ್ಯಕ್ತಿಗಳ ಜೀವನ ಚರಿತ್ರೆಗಳು ಇಲ್ಲಿ ಕಾಣಬಹುದು.

ಈ ಹಿಂದಿನ ಮೂರು ಪ್ರಮುಖ ವಸ್ತು ಆಧಾರಿತ ಕತೆಗಳ ಒಳ–ಹೊರಗನ್ನು ಸಂಪೂರ್ಣವಾಗಿ ನಾನು ಚಿತ್ರಿಸಿದ್ದೇನೆಂದು ಹೇಳಲಾರೆ. ನನಗೆ ಆಯಾ ವಸ್ತುಗಳ–ಪಾತ್ರಗಳಲ್ಲಿ ಕಾಣದಂತಹ ಗುಣ–ದೋಷಗಳು ಮತ್ತೊಬ್ಬ ಸಹೃದಯರಿಗೆ ಕಾಣಬಹುದು. ಈ ಹಿನ್ನಲೆಯಲ್ಲಿ ನಿಬಂಧ ರಚನೆಗೆ ಇಂತಹ ವಸ್ತುವನ್ನು ಆಯ್ಕೆ ಮಾಡಿಕೊಳ್ಳುವವರು ಇದನ್ನೆಲ್ಲ ಗಮನಿಸಿ ತಮ್ಮ ಅಧ್ಯಯನವನ್ನು ಮುಂದುವರೆಸಬೇಕೆಂದು ಕೇಳಿಕೊಳ್ಳುತ್ತೇನೆ. ಕೆಲವರು ಮಾಸ್ತಿಯವರನ್ನು ಸಾಹಿತ್ಯ ಕ್ಷೇತ್ರದಲ್ಲಿ ಬೆಟ್ಟು ಮಾಡಿ ತೋರಿಸಿ, ಅವರು ಸಂಪ್ರದಾಯವಾದಿಗಳು, ಲೌಕಿಕದೆಡೆ ಅವರು ಒಲವು ತೋರದೆ ಅಲೌಕಿಕದೆಡೆ

ತಮ್ಮ ಗಮನ ಕೊಟ್ಟಿರುತ್ತಾರೆಂದು ಆಕ್ಷೇಪಿಸುತ್ತಾರೆ. ಅವರ ಟೀಕೆಗಳಿಗೆ ಮಾಸ್ತಿಯವರು ಹೇಳಿರುವ ಈ ಮಾತನ್ನು ಉತ್ತರವೆಂದುಕೊಳ್ಳಬಹುದು. ನಾನು ಸಂಧ್ಯಾವಂದನೆಯನ್ನಾದರೂ ಬಿಟ್ಟೇನು, ಆದರೆ ಇಸ್ಪೀಟನ್ನು ಬಿಡಲಾರೆ ಎಂದಿರುವರು ಮಾಸ್ತಿ.

ನಮ್ಮ ಇದುವರೆಗಿನ ಪಂಪ ರನ್ನರಿಂದ ಹಿಡಿದು ಇಂದಿನ ದಲಿತ ಬಂಡಾಯ ಸಾಹಿತಿಗಳ ಸಾಹಿತ್ಯದಲ್ಲಿಯು ಗುಣಗಳಂತೆ ದೋಷಗಳನ್ನು ಗುರುತಿಸುತ್ತೇವೆ. ದೋಷಮುಕ್ತವಾದಂತಹ ಸಾಹಿತ್ಯ ಕಡಿಮೆಯೇ ಎನ್ನಬಹುದು. ಹಾಗೆಯೇ ಮಾಸ್ತಿಯವರ ಕಥೆ-ಕಾದಂಬರಿಗಳು ಕೆಲ ದೋಷಗಳಿಂದ ಕೂಡಿರುವುದು ಹೆಚ್ಚೇನಲ್ಲ.

ನಾನು ಮೊದಲೇ ತಿಳಿಸಿದ ಹಾಗೇ ಅವರ ಕತೆಗಳಲ್ಲಿನ ವಸ್ತು-ಪಾತ್ರಗಳನ್ನು ಅವಲೋಕಿಸಿದಾಗ ಅವರು ಎಲ್ಲರ ಮನ ತುಡಿತಗಳನ್ನು ಚಿತ್ರಿಸ ಬಲ್ಲವರಾಗಿದ್ದರು. ಅವರ ಸಾಹಿತ್ಯವನ್ನು ಬ್ರಾಹ್ಮಣರೆಂಬ ಕಾರಣದಿಂದ ತಿರಸ್ಕರಿಸುವ ಅಗತ್ಯವಿಲ್ಲವೆನಿಸುತ್ತದೆ. ಹಾಗೆಯೇ ಕಾವ್ಯ-ನಾಟಕ-ಕಾದಂಬರಿ ಕ್ಷೇತ್ರದಲ್ಲಿ ಮುಂಚೂಣಿಯ ಹೆಸರು ಬಾರದಿದ್ದರು 'ಸಣ್ಣ ಕಥೆಗಳ ಜನಕ' ಎಂದು ಅಗ್ರಮಾನ್ಯ ಸ್ಥಾನದಲ್ಲಿ ನಿಲ್ಲುತ್ತಾರೆಂಬುದನ್ನು ಗಮನಿಸಬೇಕು. ಕಥೆಗಳಲ್ಲಿ ಹೆಣ್ಣಿಗೆ ಪ್ರಾಶಸ್ತ್ಯವನ್ನು ಕೊಟ್ಟಿರುವುದನ್ನು ಓದುಗರಾದ ನಾವು ಅರಿಯಬಹುದು.

ಡಾ॥ ಅನಂತ ಮೂರ್ತಿಯರವರು ಒಂದೆಡೆ "ಇಂದಿನ ನಮ್ಮ ಮಕ್ಕಳಿಗೆ ಓದಲು ಕೊಡಬಹುದಾದಂತಹ ಒಳ್ಳೆಯ ಪುಸ್ತಕ ಎಂದರೆ ಅದು ಮಾಸ್ತಿಯವರ ಸಾಹಿತ್ಯ ಎಂದು ಮೆಚ್ಚುಗೆಯಿಂದ ಹೇಳಿದ್ದಾರೆ". ಆ ಸಾಮಾನ್ಯ ಮಾತುಗಾರ, ಅದ್ವಿತೀಯ ಕಥೆಗಾರ, ಹೊಸಗನ್ನಡದ ಭೀಷ್ಮಾಚಾರ್ಯ ಹಾಗೂ ಎಲ್ಲರಿಂದಲೂ

ಮುತ್ತಣ್ಣನೆಂದು ಕರೆಸಿಕೊಂಡಂತಹ ಮಾಸ್ತಿಯವರು ನಮ್ಮ ಕನ್ನಡ ನಾಡಿನ ಆಸ್ತಿ ಎಂಬುದನ್ನು ಕನ್ನಡಿಗರಾದ ನಾವು ಹೆಮ್ಮೆಯಿಂದ ಹೇಳಿಕೊಳ್ಳುವಂತಾಗಬೇಕು.

# ಪರಾಮರ್ಶನ ಗ್ರಂಥಗಳು

೧. ಮಾಸ್ತಿ ಅವರ ಸಮಗ್ರಕತೆಗಳು — ಸಂಪುಟ ೦೧
ಸಂಪಾದಕ : ಮಾವಿನ ಕೆರೆ ರಂಗನಾಥನ್
ಪುರೋಗಾಮಿ ಸಾಹಿತ್ಯ ಸಂಘ
ಮಲ್ಲೇಶ್ವರಂ, ಬೆಂಗಳೂರು.

೨. ಶ್ರೀನಿವಾಸ — ಮಾಸ್ತಿ ಸಂಭಾವನಾ ಗ್ರಂಥ
ಸಂಪಾದಕ ಮಾವಿನಕೆರೆ ರಂಗನಾಥನ್
ಗೌರವ ಸಂಪಾದಕರು ತಿ.ತಾ. ಶರ್ಮಾ
ಡಾ॥ ಮಾಸ್ತಿ ಶತಮಾನೋತ್ಸವ ಸಮಿತಿ, ಬೆಂಗಳೂರು.

೩. ಮಾಸ್ತಿ — ರಾ. ಲಕ್ಷ್ಮೀನಾರಾಯಣ
ಕರ್ನಾಟಕ ಸಾಹಿತ್ಯ ಅಕಾಡೆಮಿ
ಪ್ರಧಾನ ಸಂಪಾದಕರು-ಶಾಂತರಸ ಅಧ್ಯಕ್ಷರು
ಕರ್ನಾಟಕ ಸಾಹಿತ್ಯ ಅಕಾಡೆಮಿ.

೪. ಪ್ರಬುದ್ಧ ಕರ್ನಾಟಕ — ಮಾಸ್ತಿ ಸಂಚಿಕೆ, ಸಂಪುಟ ೬೨
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು೯೮೩
ಪ್ರ. ಸಂಪಾದಕರು ಡಾ.ಎಸ್. ತಿಪ್ಪೇರುದ್ರಸ್ವಾಮಿ
ಪ್ರಕಾಶಕರು ಕೆ.ಟಿ. ವೀರಪ್ಪ ನಿರ್ದೇಶಕರು
ಪ್ರಸಾರಾಂಗ, ಮೈಸೂರು ವಿ.ವಿ

೫. ಮಾಸ್ತಿಸಾಹಿತ್ಯ ಸಮಗ್ರದರ್ಶನ — ಸಂಪಾದಕರು ಡಿ.ಎಸ್. ನಾಗಭೂಷಣ, ರಾಘವೇಂದ್ರ ಪಾಟೀಲ, ಸ-ಉಷಾ.
ಸಂವಾದ ಪ್ರಕಾಶನ, ಮಲ್ಲಾಡಿಹಳ್ಳಿ, ಚಿತ್ರದುರ್ಗ.

೬. ಮಾಸ್ತಿ ವೆಂಕಟೇಶ್ ಅಯ್ಯಂಗಾರ್ — ಜೀವನ ಕಾರ್ಯಲಯ ಟ್ರಸ್ಟ್, ಬೆಂಗಳೂರು.
ಮುದ್ರಣ ಪ್ರಗತಿ ಪ್ರಕಾಶನ, ೧೯೭೬
ಬಸವನಗುಡಿ, ಬೆಂಗಳೂರು.

೭. ಸಾಹಿತ್ಯ ಸಂಪರ್ಕ — ಟಿ.ಪಿ. ಅಶೋಕ್
ಅಕ್ಷರ ಪ್ರಕಾಶನ, ಸಾಗರ, ಕರ್ನಾಟಕ ರಾಜ್ಯ
ಮುದ್ರಕರು ಸವೀರ ಪ್ರಿಂಟರ್ಸ್
ಚಾಮರಾಜಪುರಂ, ಮೈಸೂರು.

೮. ಮಾಸ್ತಿ ಜೀವನ ಮತ್ತು ಸಾಹಿತ್ಯ — ಎಲ್.ಎಸ್. ಶೇಷಗಿರಿರಾವ್
ಡಾ. ಮಾಸ್ತಿ ಶತಮಾನೋತ್ಸವ ಸಮಿತಿ.

೯. ಕೆಲವು ಸಣ್ಣ ಕತೆಗಳು — (ಎಂ. ಎಸ್. ರಾವ್ ಅಂಡ್ ಸನ್ಸ್, ಬೆಂಗಳೂರು.
ಇವರಿಂದ ಪ್ರಥಮ ಮುದ್ರಣ ೧೯೨೦) ಜೀವನ ಕಾರ್ಯಾಲಯ,
ಬೆಂಗಳೂರು.

೧೦. ಮಾಸ್ತಿ ಸಾಹಿತ್ಯ ಚಿಂತನ | ಸಂಪಾದಕ : ಜಿ.ಎಸ್. ಭಟ್ಟ
ಚೇತನ್ ಬುಕ್ ಹೌಸ್
ನಾರಾಯಣ ಶಾಸ್ತ್ರಿ ರಸ್ತೆ, ಮೈಸೂರು-೨೪

೧೧. ಶ್ರೀ ಮಾಸ್ತಿಯವರ ಕಥೆಗಳು | ಎ.ಎನ್. ಮೂರ್ತಿರಾವ್
ಕಾವ್ಯಾಲಯ : ಪ್ರಕಾಶಕರು : ವಿಜಯನಗರ, ಮೈಸೂರು.

೧೨. ಪುಸ್ತಕ ಪ್ರೀತಿ (ಲೇಖನಗಳು) | ಟಿ.ಪಿ. ಅಶೋಕ
ಅಕ್ಷರ ಪ್ರಕಾಶನ ಹೆಗ್ಗೋಡು, ಕರ್ನಾಟಕ
ಮುದ್ರಣ ಶೋಭಾ ಪ್ರೋಸೆಸ್ ಪ್ರಿಂಟರ್ಸ್, ದರ್ಬೆ, ೧೯೯೩

೧೩. ಕನ್ನಡ ನಾಡಿನ ಪ್ರಸಿದ್ಧ ಕವಿಗಳು | ಬೆ.ಗೋ. ರಮೇಶ್
ವಾಸನ್ ಪಬ್ಲಿಕೇಷನ್ಸ್. ವಾಸನ್ ಟವರ್ಸ್ ೨೫
ಬೆಂಗಳೂರು -೫೩

೧೪. ಮಾಸ್ತಿಯವರ ಸಣ್ಣ ಕಥೆಗಳು | ಕೃಷ್ಣಮೂರ್ತಿ ಎಂ.ಜಿ.
"ಆಧುನಿಕ ಭಾರತೀಯ ಸಾಹಿತ್ಯ ಮತ್ತು ಇತರ ಲೇಖನಗಳು"
ಅಕ್ಷರ ಪ್ರಕಾಶನ, ಸಾಗರ. ೧೯೭೦

೧೫. ಸಣ್ಣ ಕಥೆಗಳು | ಸಂಪುಟ-೦೪
ಶ್ರೀನಿವಾಸ, ಎಂ. ವಿ. ಜಿ.ಕೆ. ಟ್ರಸ್ಟ್, 'ಮಾಸ್ತಿ ಮನೆ'
ಬೆಂಗಳೂರು-೧೯

೧೬. ಸಣ್ಣ ಕಥೆಗಳು — ಸಂಪುಟ-೦೫
ಶ್ರೀನಿವಾಸ, ಎಂ. ವಿ. ಜಿ.ಕೆ. ಟ್ರಸ್ಟ್, 'ಮಾಸ್ತಿ ಮನೆ'
ಬೆಂಗಳೂರು-೧೯

೧೭. 'ಮಾಸ್ತಿಯವರ ಕಥೆಗಳಲ್ಲಿ ಸಂಸ್ಕೃತಿ ಮತ್ತು ಪ್ರವೃತ್ತಿ' "ಸಮಕ್ಷಮ" — ಯು.ಆರ್. ಅನಂತ ಮೂರ್ತಿ.
ಅನನ್ಯ ಪ್ರಕಾಶನ, ಮೈಸೂರು, ೧೯೮೦

೧೮. ಮಾಸ್ತಿಯವರ ಕಾವ್ಯ ಒಂದು ಅಧ್ಯಯನ — ಡಾ|| ಸಿ.ಪಿ. ಸಿದ್ಧಾಶ್ರಮ.
ಪ್ರಕಾಶಕರು: ನಿರ್ದೇಶಕರು : ಪ್ರಸರಾಂಗ,
ಮೈಸೂರು ವಿ.ವಿ. ಮೈಸೂರು-೬

